ಕ್ರಮ ಸಂಖ್ಯೆ (2), (3) ಮತ್ತು (4)ರಲ್ಲಿ ಸೂಚಿಸಿರುವ ಪ್ರದೇಶಗಳಿಗೆ ಈಗಾಗಲೇ ಈ ಕಾಯ್ದೆಯ ಅಧಿನಿಯಮ 7(1)ರನ್ವಯ ಹೊರಡಿಸಲಾದ ಪ್ರಕಟಣೆಯ ಬದಲಾಗಿ ಪ್ರಸ್ತುತ ಪ್ರಕಟಣೆಯು ಅನ್ವಯವಾಗುತ್ತದೆ.

ಮೇಲೆ ತಿಳಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ಉಳಿದ "ಅಧಿಸೂಚಿತ ಪ್ರದೇಶ" ಗಳಲ್ಲಿ ಈಗಾಗಲೇ ಈ ಕಾಯ್ದೆಯ ಅಧಿನಿಯಮ 7(1)ರನ್ವಯ ಹೊರಡಿಸಲಾದ ಪ್ರಕಟಣೆಯಲ್ಲಿ ನಿಗದಿಪಡಿಸಿರುವ "ಗಡಿರೇಖೆ", "ಕಟ್ಟಡ ರೇಖೆ" ಮತ್ತು "ನಿಯಂತ್ರಣ ರೇಖೆ" ಗಳೇ ಅನ್ವಯವಾಗುತ್ತವೆ.

ಇದರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಸಂಬಂಧಿಸಿದ ಜಿಲ್ಲೆಯ ಹೆದ್ದಾರಿ ಪ್ರಾಧಿಕಾರದಿಂದ ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಮಂಜುಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ನಬಾರ್ಡ್)

# ಕರ್ನಾಟಕ ವಿಧಾನಸಭೆ

## 15ನೇ ವಿಧಾನಸಭೆ

## 1ನೇ ಅಧಿವೇಶನ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 486

ಸದಸ್ಯರ ಹೆಸರು : ಶ್ರೀ ಬಸವರಾಜ್ ಮತ್ತಿಮುಡ (ಗುಲ್ಬರ್ಗಾ ಗ್ರಾಮಾಂತರ)

ಉತ್ತರಿಸುವ ದಿನಾಂಕ : 11-07-2018

ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಲ್ಲಿ ಕಲಬುರ್ಗಿ ಗ್ರಾಮೀಣ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆ ವತಿಯಿಂದ ವಿವಿಧ ಯೋಜನೆಗಳಡಿಯಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು; (ಸಂಪೂರ್ಣ ಮಾಹಿತಿ ಒದಗಿಸುವುದು) | 2015-16, 2016-17 ಹಾಗೂ 2017-18ನೇ ಸಾಲಿನಲ್ಲಿ ಕಲಬುರ್ಗಿ ಗ್ರಾಮೀಣ ಮತಕ್ಷೇತ್ರದ ವ್ಯಾಪ್ತಿಯಲ್ಲಿ ವಿವಿಧ ಯೋಜನೆಗಳಡಿ ಕೈಗೊಂಡ ಕಾಮಗಾರಿಗಳಿಗೆ ಭರಿಸಲಾದ ವೆಚ್ಚ ಹಾಗೂ ಪ್ರಸ್ತುತ ಹಂತದ ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ. | ಸದರಿ ಕಾಮಗಾರಿಗಳಿಗೆ ಬಿಡುಗಡೆಯಾದ ಹಾಗೂ ಇದುವರೆಗೆ ಖರ್ಚಾದ ಅನುದಾನವೆಷ್ಟು; | |
| ಇ. | ಸದರಿ ಕಾಮಗಾರಿಗಳು ಯಾವ ಹಂತದಲ್ಲಿವೆ? (ಸಂಪೂರ್ಣ ಮಾಹಿತಿ ಒದಗಿಸುವುದು) | |

ಲೋಇ/429/ಐಎಫ್ಎ/2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಕರ್ನಾಟಕ ವಿಧಾನಸಭೆ
## 15 ನೇ ವಿಧಾನಸಭೆ
## 1ನೇ ಅಧಿವೇಶನ
## (ಮುಂದುವರೆದ ಉಪವೇಶನಗಳು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 684
ಮಾನ್ಯ ಸದಸ್ಯರ ಹೆಸರು : ಶ್ರೀ. ಸಿದ್ದು ಸವದಿ (ತೇರದಾಳ)
ಉತ್ತರಿಸುವ ದಿನಾಂಕ : 11-07-2018
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜಮಖಂಡಿಯಿಂದ ಕಾಗವಾಡ ರಸ್ತೆಯ ಅಗಲೀಕರಣ ಮತ್ತು ಡಾಂಬರೀಕರಣ ಕಾಮಗಾರಿಯನ್ನು ಕೆಶಿಪ್ ಅಥವಾ ಇತರ ಯಾವ ಯೋಜನೆಯಲ್ಲಿ ಕೈಗೊಳ್ಳಲಾಗುವುದು; | ಜಮಖಂಡಿಯಿಂದ ಕಾಗವಾಡ ರಸ್ತೆಯ ಅಗಲೀಕರಣ ಮತ್ತು ಡಾಂಬರೀಕರಣ ಕಾಮಗಾರಿಯನ್ನು ಕೆಶಿಪ್ ಅಥವಾ ಇತರೆ ಯಾವುದೇ ಯೋಜನೆಯಲ್ಲಿ ಕೈಗೊಳ್ಳುವ ಪ್ರಸ್ತಾವನೆ ಇರುವುದಿಲ್ಲ. |
| ಆ) | ತೇರದಾಳ ಮತಕ್ಷೇತ್ರದಲ್ಲಿ ಲೋಕೋಪಯೋಗಿ ಇಲಾಖೆ ವ್ಯಾಪ್ತಿಗೆ ಬರುವ ರಸ್ತೆಗಳು ಯಾವುವು ; ಅವುಗಳಲ್ಲಿ ಹದಗೆಟ್ಟ ರಸ್ತೆಗಳ ಸುದಾರಣ ಕಾಮಗಾರಿಗಳನ್ನು ಯಾವಾಗ ದುರಸ್ತಿ ಮಾಡಲಾಗುವುದು ? | ತೇರದಾಳ ಮತಕ್ಷೇತ್ರದಲ್ಲಿ ಲೋಕೋಪಯೋಗಿ ಇಲಾಖೆ ವ್ಯಾಪ್ತಿಗೆ ಬರುವ ರಸ್ತೆಗಳ ವಿವರಗಳನ್ನು ಅನುಬಂಧ (1) ಮತ್ತು (2) ರಲ್ಲಿ ಲಗತ್ತಿಸಲಾಗಿದೆ.<br><br>ತೇರದಾಳ ಮತಕ್ಷೇತ್ರದಲ್ಲಿ ರಸ್ತೆಗಳ ಸುಧಾರಣೆ ಕಾಮಗಾರಿಗಳನ್ನು ಲೆಕ್ಕಶೀರ್ಷಿಕೆ 5054 ಜಿಲ್ಲಾ ಮುಖ್ಯ ರಸ್ತೆ ಸುಧಾರಣೆ ಅಡಿಯಲ್ಲಿ ರೂ.83.00 ಲಕ್ಷಗಳ ಮೊತ್ತದ ಕಾಮಗಾರಿಗಳನ್ನು ಕೈಗೊಂಡಿದ್ದು, ಕಾಮಗಾರಿಗಳು ಮುಕ್ತಾಯದ ಹಂತದಲ್ಲಿರುತ್ತದೆ. ವಿವರಗಳು ಕೆಳಗಿನಂತಿವೆ:<br><br>1) ತೇರದಾಳದಿಂದ ತಮದಡ್ಡಿ ಕಿಮೀ 0.00 ರಿಂದ ಕಿಮೀ 5.75 ವರೆಗೆ ಅಗಲೀಕರಣ.<br>2) ತೇರದಾಳ-ಗೊಲಬಾವಿ-ಹಂದಿಗುಂಡ ರಸ್ತೆಯ ಕಿಮೀ 0.00 ರಿಂದ ಕಿಮೀ 2.50 ವರೆಗೆ ಅಭಿವೃದ್ಧಿ.<br>3) ತೇರದಾಳ-ಸಸಾಲಟ್ಟಿ ರಸ್ತೆಯ ಕಿಮೀ 1.50 ರಿಂದ ಕಿಮೀ 4.64 ವರೆಗೆ ಅಭಿವೃದ್ಧಿ.<br>4) ಯಲ್ಲಟ್ಟಿ-ಅಸನಗಿ ಡೆಂಪೊ ಡ್ಯೆರಿ ಮದನಮಟ್ಟಿ ರಸ್ತೆ ಅಗಲೀಕರಣ.<br>5) ತೇರದಾಳ-ಗೊಲಬಾವಿ-ಹುಂದಿಗುಂಡ ರಸ್ತೆಯ ಕಿಮೀ 2.50 ರಿಂದ ಕಿಮೀ 6.50 ವರೆಗೆ ಅಭಿವೃದ್ಧಿ. |

ಸಂಖ್ಯೆ. ಲೋಇ 126 ಇಎಪಿ 2018

(ಹೆಚ್.ಡಿ.ರೇವಣ್ಣ)
ಲೋಕೋಪಯೋಗಿ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸಿದ್ದು ಸವದಿ(ತೇರದಾಳ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 684ಕ್ಕೆ ಕರಡು ಉತ್ತರಗಳು

ರಾಜ್ಯಹೆದ್ದಾರಿ(ವಿಧಾನಸಭೆ ಕ್ಷೇತ್ರವಾರು)

(ಅನುಬಂಧ-1)

ವಿಭಾಗದ ಹೆಸರು:- ಬಾಗಲಕೋಟ

| ಕ್ರ ಸಂ | ತಾಲ್ಲೂಕಿನ ಹೆಸರು | ವಿಧಾನ ಸಭಾ ಕ್ಷೇತ್ರದ ಹೆಸರು | ರಸ್ತೆಯ ಹೆಸರು ಮತ್ತು ಸಂಖ್ಯೆ | ರಸ್ತೆಯ ಉದ್ದ ಕಿ.ಮಿ | ಪ್ರಾರಂಭದ ಸರಪಳಿ | ಮುಕ್ತಾಯದ ಸರಪಳಿ | ಮೇಲ್ಮೈಹೊಂದಿರುವ ರಸ್ತೆಯ | | | ಮೇಲ್ಮೈಹೊಂದಿರದ | | ಪಥಗಳ ವಿವರ | | | | ಷರಾ |
|---|---|---|---|---|---|---|---|---|---|---|---|---|---|---|---|---|
| | | | | | | | ಸಿ.ಸಿ | ಬಿ.ಟಿ | ಡಬ್ಲ್ಯು.ಬಿ.ಎಂ | ಮೋಟಾರಬಲ್ | ನಾನ್ ಮೋಟಾರಬಲ್ | ಏಕ ಪಥ | ಮಧ್ಯಮ ಪಥ | ಎರಡು ಪಥ | ಚತುಷ ಪಥ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| ತೇರದಾಳ ಮತಕ್ಷೇತ್ರ | | | | | | | | | | | | | | | | |
| 1 | ಜಮಖಂಡಿ | ತೇರದಾಳ | ಕಾಗವಾಡ ಕಲಾದಗಿ ರಾ.ಹೆ-53 | 13.51 | 44.49 | 53.00 | 0.99 | 12.52 | 0.00 | 0.00 | 0.00 | 0.00 | 13.51 | 0.00 | 0.00 | |
| | | | | 18.99 | 58.00 | 76.99 | 0.00 | 18.99 | 0.00 | 0.00 | 0.00 | 0.00 | 0.00 | 18.99 | 0.00 | |
| | | | ಒಟ್ಟು | **32.50** | | | 0.99 | 31.51 | | | | | 13.51 | 18.99 | | |
| 2 | ಜಮಖಂಡಿ | ತೇರದಾಳ | ಜಾಂಬೋಟಿ ರಬಕವಿ ರಾ.ಹೆ-54 | 7.00 | 133.70 | 140.70 | 0.00 | 7.00 | 0.00 | 0.00 | 0.00 | 0.00 | 7.00 | 0.00 | 0.00 | |
| | | | | | 140.70 | 140.90 | | | | ಓವರ ಲ್ಯಾಪ್ ಉದ್ದ 0.20 ಕಿ.ಮೀ | | | | | | |
| | | | | 0.66 | 140.90 | 141.56 | 0.00 | 0.66 | 0.00 | 0.00 | 0.00 | 0.00 | 0.00 | 0.66 | 0.00 | |
| | | | ಒಟ್ಟು | 7.66 | | | 0.00 | 7.66 | 0.00 | 0.00 | 0.00 | 0.00 | 7.00 | 0.66 | 0.00 | |
| 3 | ಮುಧೋಳ | ತೇರದಾಳ | ಮುಧೋಳ-ನಿಪ್ಪಾಣಿ ರಾ.ಹೆ-18 | 12.50 | 15.00 | 27.50 | 0.00 | 12.50 | 0.00 | 0.00 | 0.00 | 0.00 | 0.00 | 12.50 | 0.00 | ರಸ್ತೆ ಅಭಿವೃದ್ಧಿ ಪಡಿಸಲು ಕೆಶಿಪ್ ಗೆ ಹಸ್ತಾಂತರಿಸಲಾಗಿದೆ. |
| 4 | ಮುಧೋಳ | ತೇರದಾಳ | ಜಾಂಬೋಟಿ-ರಬಕವಿ ರಾ.ಹೆ-54 | 9.46 | 123.28 | 133.70 | 0.87 | 8.59 | 0.00 | 0.00 | 0.00 | 5.82 | 2.03 | 1.61 | 0.00 | |
| | | | ತೇರದಾಳ ಮತ ಕ್ಷೇತ್ರ ಒಟ್ಟು | 62.12 | | | 1.86 | 60.26 | 0.00 | 0.00 | 0.00 | 5.82 | 22.54 | 33.76 | 0.00 | |
| | | | ವಿಭಾಗದ ಒಟ್ಟು | 62.12 | | | 1.86 | 60.26 | 0.00 | 0.00 | 0.00 | 5.82 | 22.54 | 33.76 | 0.00 | |

## ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸಿದ್ದು ಸವದಿ(ತೇರದಾಳ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 684ಕ್ಕೆ ಕರಡು ಉತ್ತರಗಳು

### ಜಿಲ್ಲಾ ಮುಖ್ಯ ರಸ್ತೆಗಳು(ವಿಧಾನಸಭೆ ಕ್ಷೇತ್ರವಾರು)

(ಅನುಬಂಧ-2)

| ಕ್ರ ಸಂ | ತಾಲ್ಲೂಕಿನ ಹೆಸರು | ವಿಧಾನ ಸಭಾ ಕ್ಷೇತ್ರದ ಹೆಸರು | ರಸ್ತೆಯ ಹೆಸರು ಮತ್ತು ಸಂಖ್ಯೆ | ರಸ್ತೆಯ ಉದ್ದ ಕಿ.ಮೀ | ಪ್ರಾರಂಭದ ಸರಪಳಿ | ಮುಕ್ತಾಯದ ಸರಪಳಿ | ಮೇಲ್ಮೈಹೊಂದಿರುವ ರಸ್ತೆಯ ವಿಧ | | | ಮೇಲ್ಮೈಹೊಂದಿರದ ರಸ್ತೆಯ ವಿಧ | | ಪಥಗಳ ವಿವರ | | | | ಷರಾ |
|---|---|---|---|---|---|---|---|---|---|---|---|---|---|---|---|---|
| | | | | | | | ಸಿ.ಸಿ | ಬಿ.ಟಿ | ಡಬ್ಲ್ಯು.ಬಿ.ಎಂ | ಮೋಟಾರಬಲ್ | ನಾನ್ ಮೋಟಾರಬಲ್ | ಏಕ ಪಥ | ಮಧ್ಯಮ ಪಥ | ಎರಡು ಪಥ | ಚತುಷ ಪಥ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| **ತೇರದಾಳ ಮತಕ್ಷೇತ್ರ** | | | | | | | | | | | | | | | | |
| 1 | ಮುಧೋಳ | ತೇರದಾಳ | ಮಹಾಲಿಂಗಪೂರ-ಮಿರ್ಜಿ-ಯಾದವಾಡ ರಸ್ತೆ. | 6.00 | 0.00 | 6.00 | 0.00 | 6.00 | 0.00 | 0.00 | 0.00 | 0.00 | 6.00 | 0.00 | 0.00 | |
| 2 | ಮುಧೋಳ | ತೇರದಾಳ | ಮಹಾಲಿಂಗಪೂರ-ನಂದಗಾಂವ ರಸ್ತೆ | 5.75 | 0.00 | 5.75 | 0.26 | 5.49 | 0.00 | 0.00 | 0.00 | 5.75 | 0.00 | 0.00 | 0.00 | |
| 3 | ಮುಧೋಳ | ತೇರದಾಳ | ಮಹಾಲಿಂಗಪೂರ-ಕೇಸರಕೊಪ್ಪ-ಹಂದಿಗುಂದಿ ರಸ್ತೆ | 6.07 | 0.00 | 6.07 | 0.00 | 6.07 | 0.00 | 0.00 | 0.00 | 0.00 | 6.07 | 0.00 | 0.00 | |
| 4 | ಮುಧೋಳ | ತೇರದಾಳ | ಮಹಾಲಿಂಗಪೂರ-ಸಂಗಾನಟ್ಟಿ-ಮದಭಾವಿ-ಮರಾಪುರ-ಮುಡಲಗಿ ರಸ್ತೆ | 9.74 | 0.00 | 9.74 | 0.00 | 9.74 | 0.00 | 0.00 | 0.00 | 9.74 | 0.00 | 0.00 | 0.00 | |
| 5 | ಮುಧೋಳ | ತೇರದಾಳ | ರಾಜ್ಯ ಹೆದ್ದಾರಿ-18 ರಿಂದ ಮದಭಾವಿ-ಧವಳೇಶ್ವರ ರಸ್ತೆ | 8.67 | 0.00 | 8.67 | 0.00 | 8.67 | 0.00 | 0.00 | 0.00 | 8.67 | 0.00 | 0.00 | 0.00 | |
| 6 | ಮುಧೋಳ | ತೇರದಾಳ | ಧವಳೇಶ್ವರ-ನಂದಗಾಂವ ರಸ್ತೆ. | 2.20 | 0.00 | 2.20 | 0.00 | 2.20 | 0.00 | 0.00 | 0.00 | 2.20 | 0.00 | 0.00 | 0.00 | |
| 7 | ಮುಧೋಳ | ತೇರದಾಳ | ಕೇಸರಕೊಪ್ಪ-ಬಿಸನಾಳ-ಸಮೀರವಾಡಿ ಸಕ್ಕರೆ ಕಾರರ್ಖಾನೆ ಕೂಡು ರಸ್ತೆ. | 3.45 | 0.00 | 3.45 | 0.00 | 3.45 | 0.00 | 0.00 | 0.00 | 3.45 | 0.00 | 0.00 | 0.00 | |
| 8 | ಮುಧೋಳ | ತೇರದಾಳ | ಕೇಸರಕೊಪ್ಪ - ಚಿಮ್ಮಡ ರಸ್ತೆ. | 2.12 | 0.00 | 2.12 | 0.00 | 2.12 | 0.00 | 0.00 | 0.00 | 2.12 | 0.00 | 0.00 | 0.00 | |
| 9 | ಜಮಖಂಡಿ | ತೇರದಾಳ | ಎಸ್.ಎಚ್-53 ಕಾಗವಾಡ ಕಲಾದಗಿ ರಸ್ತೆಯ (ರಬಕವಿ/ಬನಹಟ್ಟಿ ಹಾಗೂ ಜಮಖಂಡಿ ಪಟ್ಟಣ ಪರಿಮಿತಿಯಲ್ಲಿ ಉಳಿದ ಉಳಿಕೆ ಭಾಗ (ಜೆಎಂಕೆ-8) | 2.15 | 0.00 | 2.15 | 0.30 | 1.85 | 0.00 | 0.00 | 0.00 | 0.00 | 2.15 | 0.00 | 0.00 | |
| 10 | ಜಮಖಂಡಿ | ತೇರದಾಳ | ಹುನ್ನೂರ ಹಿಪ್ಪರಗಿ ರಸ್ತೆ (ಜೆಎಂಕೆ-65) | 5.05 | 5.95 | 11.00 | 0.00 | 5.05 | 0.00 | 0.00 | 0.00 | 0.00 | 5.05 | 0.00 | 0.00 | |
| 11 | ಜಮಖಂಡಿ | ತೇರದಾಳ | ಕುಡಚಿ ಜಮಖಂಡಿ (ತೇರದಾಳ ಪಟ್ಟಣ ಪರಿಮಿಯಲ್ಲಿ ರಿಂಗ ರಸ್ತೆ)(ಜೆಎಂಕೆ-13) | 1.20 | 0.00 | 1.20 | 1.200 | 0.000 | 0.00 | 0.00 | 0.00 | 0.00 | 1.20 | 0.00 | 0.00 | |
| | | | | 0.60 | 1.20 | 1.80 | 0.000 | 0.600 | 0.00 | 0.00 | 0.00 | 0.00 | 0.60 | 0.00 | 0.00 | |
| | | | | 0.25 | 1.80 | 2.05 | 0.000 | 0.250 | 0.00 | 0.00 | 0.00 | 0.25 | 0.00 | 0.00 | 0.00 | |

| ಕ್ರ. ಸಂ | ತಾಲ್ಲೂಕಿನ ಹೆಸರು | ವಿಧಾನ ಸಭಾ ಕ್ಷೇತ್ರದ ಹೆಸರು | ರಸ್ತೆಯ ಹೆಸರು ಮತ್ತು ಸಂಖ್ಯೆ | ರಸ್ತೆಯ ಉದ್ದ ಕಿ.ಮೀ | ಪ್ರಾರಂಭದ ಸರಪಳಿ | ಮುಕ್ತಾಯದ ಸರಪಳಿ | ಮೇಲ್ಮೈಹೊಂದಿರುವ ರಸ್ತೆಯ ವಿಧ | | | ಮೇಲ್ಮೈಹೊಂದಿರದ ರಸ್ತೆಯ ವಿಧ | | ಪಥಗಳ ವಿವರ | | | | ಷರಾ |
|---|---|---|---|---|---|---|---|---|---|---|---|---|---|---|---|---|
| | | | | | | | ಸಿ.ಸಿ | ಬಿ.ಟಿ | ಡಬ್ಲ್ಯು.ಬಿ.ಎಂ | ಮೋಟಾರಬಲ್ | ನಾನ್ ಮೋಟಾರಬಲ್ | ಏಕ ಪಥ | ಮಧ್ಯಮ ಪಥ | ಎರಡು ಪಥ | ಚತುಷ ಪಥ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| | | | ಒಟ್ಟು | 2.05 | | | 1.20 | 0.85 | 0.00 | 0.00 | 0.00 | 0.25 | 1.80 | 0.00 | 0.00 | |
| 12 | ಜಮಖಂಡಿ | ತೇರದಾಳ | ಮದರಖಂಡಿ ಕಲ್ಲೋಳ್ಳಿ-ಜಗದಾಳ-ಚಿಕ್ಕೂಡ ರಸ್ತೆ (ಜೆಎಂಕೆ-9) | 21.52 | 0.00 | 21.52 | 0.815 | 20.705 | 0.00 | 0.00 | 0.00 | 0.00 | 21.52 | 0.00 | 0.00 | |
| 13 | ಜಮಖಂಡಿ | ತೇರದಾಳ | ಮುಧೋಳ-ಕುಳಲಿ-ಸಾವಲಗಿ ಬಂಡಿಗಣಿ ಕ್ರಾಸ ರಸ್ತೆ (ಜೆಎಂಕೆ-10) | 5.79 | 13.66 | 19.45 | 0.00 | 5.79 | 0.00 | 0.00 | 0.00 | 0.00 | 5.79 | 0.00 | 0.00 | |
| | | | | 3.27 | 19.45 | 22.72 | 0.00 | 3.27 | 0.00 | 0.00 | 0.00 | 3.27 | 0.00 | 0.00 | 0.00 | |
| | | | ಒಟ್ಟು | 9.06 | | | 0.00 | 9.06 | 0.00 | 0.00 | 0.00 | 3.27 | 5.79 | 0.00 | 0.00 | |
| 14 | ಜಮಖಂಡಿ | ತೇರದಾಳ | ಮುಗಳಖೋಡ ರಬಕವಿ-ವ್ಹಾಯಾ ಸಸಾಲಟ್ಟಿ, ಕಾಲತಿಪ್ಪಿ, ಗೋಲಬಾವಿ, ಯರಗಟ್ಟಿ ರಸ್ತೆ (ಜೆಎಂಕೆ-68) | 3.00 | 3.00 | 6.00 | 0.24 | 2.76 | 0.00 | 0.00 | 0.00 | 0.00 | 3.00 | 0.00 | 0.00 | |
| | | | | 9.11 | 6.00 | 15.11 | 0.00 | 9.11 | 0.00 | 0.00 | 0.00 | 9.11 | 0.00 | 0.00 | 0.00 | |
| | | | | 3.74 | 15.11 | 18.85 | 0.00 | 3.74 | 0.00 | 0.00 | 0.00 | 0.00 | 3.74 | 0.00 | 0.00 | |
| | | | ಒಟ್ಟು | 15.85 | | | 0.24 | 15.61 | 0.00 | 0.00 | 0.00 | 9.11 | 6.74 | 0.00 | 0.00 | |
| 15 | ಜಮಖಂಡಿ | ತೇರದಾಳ | ಹನಗಂಡಿ ಯರಗಟ್ಟಿ ರಸ್ತೆ (ಜೆ.ಎಂ.ಕೆ-18) | 2.90 | 0.00 | 2.90 | 0.00 | 2.90 | 0.00 | 0.00 | 0.00 | 2.90 | 0.00 | 0.00 | 0.00 | |
| 16 | ಜಮಖಂಡಿ | ತೇರದಾಳ | ತೇರದಾಳ ಗೋಲಬಾವಿ ಹಂದಿಗುಂದ ರಸ್ತೆ (ಜೆ.ಎಂ.ಕೆ-217) | 2.50 | 0.00 | 2.50 | 0.00 | 2.50 | 0.00 | 0.00 | 0.00 | 0.00 | 2.50 | 0.00 | 0.00 | |
| | | | | 0.91 | 2.50 | 3.41 | 0.00 | 0.91 | 0.00 | 0.00 | 0.00 | 0.91 | 0.00 | 0.00 | 0.00 | |
| | | | | | 3.41 | 3.80 | 0.39 ಕಿಮೀ ಓವರ್ ಲ್ಯಾಪ್ ಇರುತ್ತದೆ. | | | | | | | | | |
| | | | | 2.70 | 3.80 | 6.50 | 0.00 | 2.70 | 0.00 | 0.00 | 0.00 | 2.70 | 0.00 | 0.00 | 0.00 | |
| | | | ಒಟ್ಟು | 6.11 | | | 0.00 | 6.11 | 0.00 | 0.00 | 0.00 | 3.61 | 2.50 | 0.00 | 0.00 | |
| 17 | ಜಮಖಂಡಿ | ತೇರದಾಳ | ತೇರದಾಳ ಸಸಾಲಟ್ಟಿ ರಸ್ತೆ (ಜೆ.ಎಂ.ಕೆ-66) | 4.64 | 0.00 | 4.64 | 0.00 | 4.64 | 0.00 | 0.00 | 0.00 | 0.00 | 4.64 | 0.00 | 0.00 | |
| 18 | ಜಮಖಂಡಿ | ತೇರದಾಳ | ಬಸಹಟ್ಟಿ ಜಗದಾಳ ರಸ್ತೆ(ಜೆ.ಎಂ.ಕೆ-218) | 2.30 | 0.00 | 2.30 | 0.00 | 2.30 | 0.00 | 0.00 | 0.00 | 0.00 | 0.00 | 2.30 | 0.00 | |
| | | | | 1.30 | 2.30 | 3.60 | 0.00 | 1.30 | 0.00 | 0.00 | 0.00 | 0.00 | 1.30 | 0.00 | 0.00 | |

| ಕ್ರ ಸಂ | ತಾಲ್ಲೂಕಿನ ಹೆಸರು | ವಿಧಾನ ಸಭಾ ಕ್ಷೇತ್ರದ ಹೆಸರು | ರಸ್ತೆಯ ಹೆಸರು ಮತ್ತು ಸಂಖ್ಯೆ | ರಸ್ತೆಯ ಉದ್ದ ಕಿ.ಮೀ | ಪ್ರಾರಂಭದ ಸರಪಳಿ | ಮುಕ್ತಾಯದ ಸರಪಳಿ | ಮೇಲ್ಮೈಹೊಂದಿರುವ ರಸ್ತೆಯ ವಿಧ | | | ಮೇಲ್ಮೈಹೊಂದಿರದ ರಸ್ತೆಯ ವಿಧ | | ಪಥಗಳ ವಿವರ | | | | ಷರಾ |
|---|---|---|---|---|---|---|---|---|---|---|---|---|---|---|---|---|
| | | | | | | | ಸಿ.ಸಿ | ಬಿ.ಟಿ | ಡಬ್ಲ್ಯು.ಬಿ.ಎಂ | ಮೋಟಾರಬಲ್ | ನಾನ್ ಮೋಟಾರಬಲ್ | ಏಕ ಪಥ | ಮಧ್ಯಮ ಪಥ | ಎರಡು ಪಥ | ಚತುಷ ಪಥ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| | | | ಒಟ್ಟು | 3.60 | | | 0.00 | 3.60 | 0.00 | 0.00 | 0.00 | 0.00 | 1.30 | 2.30 | 0.00 | |
| 19 | ಜಮಖಂಡಿ | ತೇರದಾಳ | ಹಿಪ್ಪರಗಿ ಕುಲಹಳ್ಳಿ ಯಲ್ಲಟ್ಟಿ ರಸ್ತೆ (ಜೆ.ಎಂ.ಕೆ-219) | 7.70 | 0.00 | 7.70 | 0.00 | 7.70 | 0.00 | 0.00 | 0.00 | 0.00 | 7.70 | 0.00 | 0.00 | |
| | | | ಒಟ್ಟು | 7.70 | | | 0.00 | 7.70 | 0.00 | 0.00 | 0.00 | 0.00 | 7.70 | 0.00 | 0.00 | |
| 20 | ಜಮಖಂಡಿ | ತೇರದಾಳ | ಯಲ್ಲಟ್ಟಿ ಆಸಂಗಿ ಡೆಂಪೋ ಡೈರಿ ಮದನಮಟ್ಟಿ ಕೂಡು ಹಾಗೂ | 1.00 | 0.00 | 1.00 | 0.00 | 1.00 | 0.00 | 0.00 | 0.00 | 0.00 | 1.00 | 0.00 | 0.00 | |
| | | | ಬನಹಟ್ಟಿ ಕೂಡು ರಸ್ತೆ (ಜೆ.ಎಂ.ಕೆ-220) | 3.90 | 1.00 | 4.90 | 0.00 | 3.90 | 0.00 | 0.00 | 0.00 | 3.90 | 0.00 | 0.00 | 0.00 | |
| | | | ಒಟ್ಟು | 4.90 | | | 0.00 | 4.90 | 0.00 | 0.00 | 0.00 | 3.90 | 1.00 | 0.00 | 0.00 | |
| 21 | ಜಮಖಂಡಿ | ತೇರದಾಳ | ರಬಕವಿ ತೇರದಾಳ ಮಾರ್ಗ ಹಳಿಂಗಳಿ ರಸ್ತೆ (ಜೆ.ಎಂ.ಕೆ-22) | 10.50 | 0.00 | 10.50 | 0.50 | 10.00 | 0.00 | 0.00 | 0.00 | 1.00 | 9.50 | 0.00 | 0.00 | |
| 22 | ಜಮಖಂಡಿ | ತೇರದಾಳ | ತೇರದಾಳ ತಮದಡ್ಡಿ ರಸ್ತೆ (ಜೆ.ಎಂ.ಕೆ-16) | 5.75 | 0.00 | 5.75 | 0.00 | 5.75 | 0.00 | 0.00 | 0.00 | 5.75 | 0.00 | 0.00 | 0.00 | |
| 23 | ಜಮಖಂಡಿ | ತೇರದಾಳ | ತೇರದಾಳ ಪಾಲಬಾವಿ ರಸ್ತೆ (ಜೆ.ಎಂ.ಕೆ-67) | 0.75 | 0.00 | 0.75 | 0.18 | 0.57 | 0.00 | 0.00 | 0.00 | 0.00 | 0.75 | 0.00 | 0.00 | |
| | | | | | 0.75 | 0.94 | 0.19 ಓವರ್ ಲ್ಯಾಪ್ ಇರುತ್ತದೆ. | | | | | | | | | |
| | | | | 3.56 | 0.94 | 4.50 | 0.00 | 3.56 | 0.00 | 0.00 | 0.00 | 0.00 | 3.56 | 0.00 | 0.00 | |
| | | | | 1.70 | 4.50 | 6.20 | 0.00 | 1.70 | 0.00 | 0.00 | 0.00 | 1.70 | 0.00 | 0.00 | 0.00 | |
| | | | ಒಟ್ಟು | 6.01 | | | 0.18 | 5.83 | 0.00 | 0.00 | 0.00 | 1.70 | 4.31 | 0.00 | 0.00 | |
| 4 | ಜಮಖಂಡಿ | ತೇರದಾಳ | ಚಿಮ್ಮಡ ಯರಗಟ್ಟಿ ರಸ್ತೆ(ಜೆ.ಎಂ.ಕೆ-221) | 4.50 | 0.00 | 4.50 | 0.13 | 4.37 | 0.00 | 0.00 | 0.00 | 4.50 | 0.00 | 0.00 | 0.00 | |
| 5 | ಜಮಖಂಡಿ | ತೇರದಾಳ | ತೇರದಾಳ ಹಿಡಕಲ್ ರಸ್ತೆ(ಜೆ.ಎಂ.ಕೆ-17 ) | 0.50 | 0.00 | 0.50 | 0.00 | 0.50 | 0.00 | 0.00 | 0.00 | 0.00 | 0.50 | 0.00 | 0.00 | |
| | | | | 5.10 | 0.50 | 5.60 | 0.00 | 5.10 | 0.00 | 0.00 | 0.00 | 5.10 | 0.00 | 0.00 | 0.00 | |

| ಕ್ರ ಸಂ | ತಾಲ್ಲೂಕಿನ ಹೆಸರು | ವಿಧಾನ ಸಭಾ ಕ್ಷೇತ್ರದ ಹೆಸರು | ರಸ್ತೆಯ ಹೆಸರು ಮತ್ತು ಸಂಖ್ಯೆ | ರಸ್ತೆಯ ಉದ್ದ ಕಿ.ಮೀ | ಪ್ರಾರಂಭದ ಸರಪಳಿ | ಮುಕ್ತಾಯದ ಸರಪಳಿ | ಮೇಲ್ಮೈಹೊಂದಿರುವ ರಸ್ತೆಯ ವಿಧ | | | ಮೇಲ್ಮೈಹೊಂದಿರದ ರಸ್ತೆಯ ವಿಧ | | ಪಥಗಳ ವಿವರ | | | | ಷರಾ |
|---|---|---|---|---|---|---|---|---|---|---|---|---|---|---|---|---|
| | | | | | | | ಸಿ.ಸಿ | ಬಿ.ಟಿ | ಡಬ್ಲ್ಯು.ಬಿ.ಎಂ | ಮೋಟಾರಬಲ್ | ನಾನ್ ಮೋಟಾರಬಲ್ | ಏಕ ಪಥ | ಮಧ್ಯಮ ಪಥ | ಎರಡು ಪಥ | ಚತುಷ ಪಥ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| | | | | 0.40 | 5.60 | 6.00 | 0.00 | 0.40 | 0.00 | 0.00 | 0.00 | 0.00 | 0.40 | 0.00 | 0.00 | |
| | | | ಒಟ್ಟು | 6.00 | | | 0.00 | 6.00 | 0.00 | 0.00 | 0.00 | 5.10 | 0.90 | 0.00 | 0.00 | |
| | | | ತೇರದಾಳ ಮತಕ್ಷೇತ್ರ ಒಟ್ಟು | 162.29 | | | 3.63 | 158.67 | 0.00 | 0.00 | 0.00 | 73.02 | 86.97 | 2.30 | 0.00 | |
| | | | ವಿಭಾಗದ ಒಟ್ಟು | 162.29 | | | 3.63 | 158.67 | 0.00 | 0.00 | 0.00 | 73.02 | 86.97 | 2.30 | 0.00 | |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 443
2. ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಕೆ.ಎಸ್.ಈಶ್ವರಪ್ಪ (ಶಿವಮೊಗ್ಗ)
3. ಉತ್ತರಿಸುವ ದಿನಾಂಕ : 11-07-2018
4. ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಇರುವ ಸೈನಿಕರ ಸಂಖ್ಯೆ ಎಷ್ಟು; ಅದರಲ್ಲಿ ಕಳೆದ 3 ವರ್ಷಗಳಲ್ಲಿ ವೀರ ಮರಣವನ್ನಪ್ಪಿರುವ ಸೈನಿಕರ ಸಂಖ್ಯೆ ಎಷ್ಟು; (ವಿವರ ಒದಗಿಸುವುದು) | ರಾಜ್ಯದಲ್ಲಿ ಇರುವ ಸೈನಿಕರ ಸಂಖ್ಯೆ : ಅಂದಾಜು 65,000<br>ಕಳೆದ 3 ವರ್ಷಗಳಲ್ಲಿ (01-06-2015 ರಿಂದ 30-06-2018) ವೀರ ಮರಣವನ್ನಪ್ಪಿರುವ ಸೈನಿಕರ ವಿವರ ಈ ಕೆಳಗಿನಂತಿದೆ<br>ಭೂ ಸೇನೆ: 12; ನೌಕ ಸೇನೆ: –; ವಾಯು ಸೇನೆ: –; ಅರೆ ಸೇನಾ ಪಡೆ: 02 (ಸಿ.ಆರ್.ಪಿ.ಎಫ್); ಒಟ್ಟು ಸಂಖ್ಯೆ: 14 |
| ಆ) | ಕಳೆದ 3 ವರ್ಷ ಅವಧಿಯಲ್ಲಿ ವೀರಮರಣವನ್ನಪ್ಪಿರುವ ರಾಜ್ಯದ ಸೈನಿಕರ ಕುಟುಂಬಗಳಿಗೆ ರಾಜ್ಯ ಸರ್ಕಾರ ನೀಡಿರುವ ಆಶ್ವಾಸನೆಗಳು ಯಾವುವು; ಮಾಧ್ಯಮಗಳ ಮುಂದೆ ಘೋಷಿಸಿರುವ ದಯಾತ್ಮಕ ಪರಿಹಾರಗಳೇನು; (ವಿವರ ನೀಡುವುದು) | ಕಳೆದ 3 ವರ್ಷಗಳ ಅವಧಿಯಲ್ಲಿ ವೀರ ಮರಣವನ್ನಪ್ಪಿರುವ ರಾಜ್ಯದ ಸೈನಿಕರ ಕುಟುಂಬಗಳಿಗೆ ರಾಜ್ಯ ಸರ್ಕಾರ ನೀಡಿರುವ ಆಶ್ವಾಸನೆಗಳು ಹಾಗೂ ಮಾಧ್ಯಮಗಳ ಮುಂದೆ ಘೋಷಿಸಿರುವ ದಯಾತ್ಮಕ ಪರಿಹಾರಗಳ ವಿವರವನ್ನು **ಅನುಬಂಧ 'ಅ'** ರಲ್ಲಿ ಒದಗಿಸಲಾಗಿದೆ. |
| ಇ) | ರಾಜ್ಯ ಸರ್ಕಾರದಿಂದ ಘೋಷಿತವಾಗಿರುವ ಆಶ್ವಾಸನೆಗಳು ನಿಗದಿತ ಸಮಯಕ್ಕೆ ಸರಿಯಾಗಿ ಸೈನಿಕ ಕುಟುಂಬಗಳಿಗೆ ಒದಗಿಸಲಾಗಿದೆಯೇ; (ಮಾಹಿತಿ ನೀಡುವುದು) | ರಾಜ್ಯ ಸರ್ಕಾರದಿಂದ ಘೋಷಿತವಾಗಿರುವ ಆಶ್ವಾಸನೆಗಳಲ್ಲಿ ಸೈನಿಕ ಕುಟುಂಬಗಳಿಗೆ ಒದಗಿಸಲಾಗಿರುವ ಸವಲತ್ತುಗಳ ವಿವರಗಳನ್ನು **ಅನುಬಂಧ 'ಆ'** ರಲ್ಲಿ ಒದಗಿಸಲಾಗಿದೆ. |
| ಈ) | ಸೈನಿಕ ಕುಟುಂಬಗಳಿಗೆ ನೀಡಲಾದ ಆಶ್ವಾಸನೆಗಳನ್ನು ಈವರೆಗೂ ಪೂರೈಸದಿರಲು ಕಾರಣಗಳೇನು; ವೀರಮರಣವನ್ನಪ್ಪುವ ಸೈನಿಕ ಕುಟುಂಬಗಳಿಗೆ ರಾಜ್ಯ ಸರ್ಕಾರ ವಿಶೇಷ ಸವಲತ್ತು ನೀಡಲು ಚಿಂತಿಸಿರುವ ಯೋಜನೆಗಳೇನಾದರೂ ಇವೆಯೇ? (ವಿವರ ಒದಗಿಸುವುದು) | ಸೈನಿಕ ಕುಟುಂಬಗಳಿಗೆ ನೀಡಲಾದ ಆಶ್ವಾಸನೆಗಳನ್ನು ಪೂರೈಸಲಾಗಿರುತ್ತದೆ. ವೀರಮರಣವನ್ನಪ್ಪುವ ಸೈನಿಕ ಕುಟುಂಬಗಳಿಗೆ ರಾಜ್ಯ ಸರ್ಕಾರ ಅನುಕಂಪದ ಮೇಲೆ ರಾಜ್ಯ ಸರ್ಕಾರದ ಹುದ್ದೆಗಳಲ್ಲಿ ನೇಮಕಾತಿ ಅವಕಾಶ ಕಲ್ಪಿಸುವ ಕುರಿತು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಒಇ 78 ಕಸೈಸೇ 2018

(ಡಾ॥ ಜಿ.ಪರಮೇಶ್ವರ)
ಉಪ ಮುಖ್ಯಮಂತ್ರಿಗಳು

## ಅನುಬಂಧ 'ಅ'

## ಯುದ್ಧ ಅಥವಾ ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮೃತರಾದ ಯೋಧರ ಕುಟುಂಬದ ಸದಸ್ಯರಿಗೆ ಕರ್ನಾಟಕ ರಾಜ್ಯ ಸರ್ಕಾರದಿಂದ ನೀಡುವ ಸೌಲಭ್ಯಗಳು

(i) ಎಕ್ಸ್ ಗ್ರೇಷಿಯ – ರೂ 5 ಲಕ್ಷಗಳ ಅನುದಾನವನ್ನು ಯುದ್ಧದಲ್ಲಿ ಮಡಿದ ಯೋಧರ ಮಡದಿಗೆ/ ಅವಲಂಬಿತರಿಗೆ ನೀಡಲಾಗುವುದು.

(ii) ಯುದ್ಧದಲ್ಲಿ ಮಡಿದ ಯೋಧರ ಮಡದಿಗೆ/ಅವಲಂಬಿತರಿಗೆ 2 ಎಕರೆ ನೀರಾವರಿ ಜಮೀನು ಅಥವಾ 4 ಎಕರೆ ಮಳೆ ಆಧಾರಿತ ಜಮೀನು ಅಥವಾ 8 ಎಕರೆ ಒಣ ಜಮೀನು ಬದಲಿಗೆ ನಗದು ಹಣ ರೂ 10 ಲಕ್ಷ ನೀಡಲಾಗುವುದು.

(iii) ಯುದ್ಧ ಅಥವಾ ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮೃತರಾದ ವೀರ ಯೋಧರ ಅವಲಂಬಿತರಿಗೆ ಸರ್ಕಾರವು ಉಚಿತ ಮನೆ ಅಥವಾ ಮನೆ ಬದಲಿಗೆ ನಗದು ಅನುದಾನ ರೂ 4.5 ಲಕ್ಷ ಇತರೆ ರ್‍ಯಾಂಕನವರಿಗೆ ಮತ್ತು ರೂ 6 ಲಕ್ಷಗಳವರೆಗೆ ಅಧಿಕಾರಿಗಳು/ಜೆಸಿಒಗಳಿಗೆ ನೀಡಲಾಗುವುದು.

(iv) ನಗರಾಭಿವೃದ್ಧಿ ಪ್ರಾಧಿಕಾರದಿಂದ ಅಧಿಕಾರಿಗಳು/ಜೆಸಿಒಗಳಿಗೆ 60'X40' ಮತ್ತು ಇತರೆ ರ್‍ಯಾಂಕನವರಿಗೆ 30'X40' ಉಚಿತ ನಿವೇಶನ ನೀಡಲಾಗುವುದು. ನಿವೇಶನವು ಲಭ್ಯವಿಲ್ಲದಿದ್ದಲ್ಲಿ/ಫಲಾನುಭವಿಗಳು ಇಚ್ಛೆಪಟ್ಟಲ್ಲಿ ಈ ಕೆಳಕಂಡಂತೆ ಅನುದಾನ ನೀಡಲಾಗುವುದು:-

| | ಬೆಂಗಳೂರು ನಗರ | ಇತರೆ ಪ್ರದೇಶಗಳಲ್ಲಿ |
|---|---|---|
| (ಅ) ಅಧಿಕಾರಿ/ಕಮಿಷನ್ಡ್ ಅಧಿಕಾರಿ ಅಧಿಕಾರಿಗಳ ಅವಲಂಬಿತರು | ರೂ 25,00,000/- | ರೂ 20,00,000/- |
| (ಆ) ನಾನ್ ಕಮಿಷನ್ಡ್ ಅಧಿಕಾರಿಗಳು ಮತ್ತು ಇತರರು | ರೂ 20,00,000/- | ರೂ 15,00,000/- |

(v) ಮೃತ ವೀರ ಯೋಧರ ಅವಲಂಬಿತರಿಗೆ ಮನೆ ರಿಪೇರಿಗೆ ಪ್ರತಿ 15 ವರ್ಷಗಳಿಗೊಮ್ಮೆ ರೂ 3,00,000/- ನೀಡಲಾಗುವುದು. ಎರಡು ಬಾರಿ ತೆಗೆದುಕೊಳ್ಳ ಬಹುದಾಗಿದೆ.

(vi) ಪ್ರತಿಯೊಬ್ಬ ಮೃತ ವೀರ ಯೋಧರ ಮತ್ತು ಗಾಯಗೊಂಡ ವೀರ ಯೋಧರ ಹೆಣ್ಣುಮಕ್ಕಳಿಗೆ ಮದುವೆ ಅನುದಾನ ರೂ 1,00,000/- ನೀಡಲಾಗುವುದು.

(vii) ಮಡಿದ ವೀರ ಯೋಧರ ಪತ್ನಿಯರಿಗೆ/ಅವಲಂಬಿತರಿಗೆ ಮನೆ ಕಂದಾಯದಲ್ಲಿ ರಿಯಾಯತಿ ನೀಡಲಾಗುವುದು.

(viii) ಯುದ್ಧ ಅಥವಾ ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮೃತರಾದ ವೀರ ಯೋಧರ ಅವಲಂಬಿತರಿಗೆ ಉಚಿತ ಬಸ್ ಪಾಸ್ ನೀಡಲಾಗವುದು.

(ix) ಯುದ್ಧ ಅಥವಾ ಯುದ್ಧದಂತಹ ಕಾರ್ಯಾಚರಣೆಯಲ್ಲಿ ಮೃತರಾದ ವೀರ ಯೋಧರ ಅವಲಂಬಿತರಿಗೆ ಮಾಜಿ ಸೈನಿಕರಿಗಾಗಿ ಇರುವ ಮೀಸಲಾತಿಯಡಿಯಲ್ಲಿ ಸರ್ಕಾರಿ ನೌಕರಿ ನೀಡಲಾಗುವುದು.

ಷರಾ : ಮುಖ್ಯಮಂತ್ರಿಗಳ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಮೃತ ಯೋಧರ ವಿಧವೆಯವರಿಗೆ 25 ಲಕ್ಷಗಳ ಅನುದಾನ ನೀಡಲಾಗುತ್ತಿದೆ.

## ಅನುಬಂಧ 'ಅ'

### 01-06-2015 ರಿಂದ 03 ವರ್ಷಗಳ ಅವಧಿಯಲ್ಲಿ ಯುದ್ಧ/ಯುದ್ಧದಂತಹ ಕಾರ್ಯಾಚರಣೆಯಲ್ಲಿ ಹುತಾತ್ಮರಾದ ಯೋಧರ ಪತ್ನಿಗೆ/ಅವಲಂಬಿತರಿಗೆ ನೀಡಲಾದ ಸೌಲಭ್ಯಗಳ ವಿವರಗಳು

| ಕ್ರ.ಸಂ | ಹುತಾತ್ಮ ಯೋಧನ ಹೆಸರು | ಹುತಾತ್ಮರಾದ ದಿನಾಂಕ | ಅನುಗ್ರಹ ಪೂರ್ವಕ ಅನುದಾನ | ಉಚಿತ ನಿವೇಶನ | ಉಚಿತ ಜಮೀನು | ಷರಾ |
|---|---|---|---|---|---|---|
| 1 | ಸುಬೇದಾರ್ ನಾಗೇಶ.ಟಿ.ಟಿ | 10-02-2016 | ನೀಡಲಾಗಿದೆ | ಹಾಸನ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಜಮೀನು ಮಂಜೂರಾಗಿದೆ. | |
| 2 | ಸಿಪಾಯಿ ಮಹೇಶ.ಪಿ.ಎನ್ | 10-02-2016 | ನೀಡಲಾಗಿದೆ | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ . | ಮೈಸೂರು ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 3 | ಲೆಫ್ಟಿನೆಂಟ್ ಕರ್ನಲ್ ನಿರಂಜನ್.ಇ.ಕೆ | 01-01-2016 | ನೀಡಲಾಗಿದೆ | – | – | ಇವರ ಪತ್ನಿ ಕೇರಳದಲ್ಲಿ ನೆಲೆಸಿರುತ್ತಾರೆ |
| 4 | ಲ್ಯಾನ್ಸ್ ನಾಯಕ್ ಸಹದೇವ್ ಮೋರೆ | 12-02-2016 | ನೀಡಲಾಗಿದೆ | ವಿಜಯಪುರ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ವಿಜಯಪುರ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 5 | ಲ್ಯಾನ್ಸ್ ನಾಯಕ್ ಹನುಮಂತಪ್ಪ ಬ್ಯಾಳಿ | 02-01-2016 | ನೀಡಲಾಗಿದೆ | ಅರ್ಜಿ ಸಲ್ಲಿಸಲು ವಿವರಗಳನ್ನು ಕೇಳಲಾಗಿದೆ. | ಗದಗ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 6 | ಸಿಪಾಯಿ ಹಸನ್ ಸಾಬ್ ಖಿದಾವಂದ್ | 29-07-2016 | ನೀಡಲಾಗಿದೆ | ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಧಾರವಾಡ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 7 | ಸಿಪಾಯಿ ಸಾಗರ್ ಕುಂಬಾರ್ | 16-08-2018 | ನೀಡಲಾಗಿದೆ | ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಬೆಳಗಾವಿ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 8 | ಸುಬೇದಾರ್ ಬಸಪ್ಪ ಪಾಟೀಲ್ | 29-07-2016 | ನೀಡಲಾಗಿದೆ | ಬೆಳಗಾವಿ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಅನುದಾನಕ್ಕಾಗಿ ಅರ್ಜಿ ಸಲ್ಲಿಸಿರುತ್ತಾರೆ | |

| | | | | | | |
|---|---|---|---|---|---|---|
| 9 | ಮೇಜರ್ ಅಕ್ಷಯ್ ಕುಮಾರ್ | 25-11-2016 | ನೀಡಲಾಗಿದೆ | ಬೆಂಗಳೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಬೆಂಗಳೂರು ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 10 | ಸಿಪಾಯಿ ಸಂದೀಪ್ ಕುಮಾರ | 26-01-2017 | ನೀಡಲಾಗಿದೆ | ಹಾಸನ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಹಾಸನ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | |
| 11 | ಲ್ಯಾನ್ಸ್ ನಾಯಕ್ ಹನುಮಂತಪ್ಪ ಕೊಪ್ಪದ್ | 11-02-2016 | ನೀಡಲಾಗಿದೆ | ನಿವೇಶನ ಮಂಜೂರಾಗಿದೆ | ಜಮೀನು ಮಂಜೂರಾಗಿದೆ | |
| 12 | ಸಿಪಾಯಿ ಏಕನಾಥ್.ಕೆ | 22-07-2017 | - | - | - | ದಾಖಲೆಗಳು ಸ್ವೀಕೃತಿಯಾಗಿರುವುದಿಲ್ಲ. |
| 13 | ಅರೆ ಸೈನಿಕ ಪಡೆ- ಸಿ.ಆರ್.ಪಿ.ಎಫ್ ಹೆಡ್ ಕಾನ್ಸ್ಟೇಬಲ್ ಬಸಪ್ಪ ಬಜಂತ್ರಿ | 03-04-2017 | ನೀಡಲಾಗಿದೆ | ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಧಾರವಾಡ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಂಜೂರಾತಿಗಾಗಿ ಸಲ್ಲಿಸಲಾಗಿದೆ | ಸಿ.ಆರ್.ಪಿ. ಎಫ್ ಕಮಾಂಡೆಂಟ್ ಶಿಫಾರಸ್ಸು ಮಾಡಿ ಅರ್ಜಿ ಸಲ್ಲಿಸಿರುತ್ತಾರೆ |
| 14 | ಕಾನ್ಸ್ಟೇಬಲ್ ಮಂಜುನಾಥ್.ಎಸ್. ಜಕ್ಕಣ್ಣನವರ್ | 26-11-2017 | - | - | - | ದಾಖಲೆಗಳು ಸ್ವೀಕೃತಿಯಾಗಿರುವುದಿಲ್ಲ. |

--------00--------

**ಕರ್ನಾಟಕ ವಿಧಾನಸಭೆ**
**15 ನೇ ವಿಧಾನಸಭೆ**
**1ನೇ ಅಧಿವೇಶನ**
**(ಮುಂದುವರೆದ ಉಪವೇಶನಗಳು)**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 32
ಮಾನ್ಯ ಸದಸ್ಯರ ಹೆಸರು : ಶ್ರೀ. ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
ಉತ್ತರಿಸುವ ದಿನಾಂಕ : 11-07-2018
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯ ಕೂಡ್ಲಿ ಪೇಟೆಯಿಂದ ಸೋಮವಾರಪೇಟೆ, ವಿರಾಜಪೇಟೆಗೆ ದ್ವಿಪಥ ರಸ್ತೆ ಮಾಡಲು ಈ ಹಿಂದೆ ಕೆ.ಶಿಪ್ ಯೋಜನೆಯಡಿಯಲ್ಲಿ ಡಿ.ಪಿ.ಆರ್ ಆಗಿದ್ದು, ಈವರೆವಿಗೂ ಕಾಮಗಾರಿ ಕೈಗೊಂಡಿಲ್ಲದಿರುವುದಕ್ಕೆ ಕಾರಣವೇನು ? (ಪೂರ್ಣ ವಿವರ ನೀಡುವುದು) | ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್-3) ಎಡಿಬಿ-2ನೇ ಆರ್ಥಿಕ ನೆರವಿನಡಿಯಲ್ಲಿ ಅನುದಾನದ ಕೊರತೆಯಿಂದಾಗಿ ಸದರಿ ರಸ್ತೆಯನ್ನು ಕೈಬಿಡಲಾಗಿದೆ. |
| ಆ) | ಸೋಮವಾರಪೇಟೆ, ಪುಷ್ಪಗಿರಿ, ಸುಬ್ರಮಣ್ಯ ರಸ್ತೆಯನ್ನು ಸುಬ್ರಮಣ್ಯದವರೆಗೆ ಸಂಪರ್ಕ ಕಲ್ಪಿಸಲು ಸರ್ಕಾರ ತೆಗೆದುಕೊಂಡ ಕ್ರಮವೇನು ; | • ಸೋಮವಾರಪೇಟೆ ಬೀದಳ್ಳಿ-ಪುಷ್ಪಗಿರಿ-ಸುಬ್ರಮಣ್ಯ ರಸ್ತೆಯು ಒಟ್ಟು 14.00 ಕಿಮೀ ಉದ್ದವಿದ್ದು, ಸದರಿ ರಸ್ತೆಯನ್ನು ಲೋಕೋಪಯೋಗಿ ಇಲಾಖೆ ವತಿಯಿಂದ ನಿರ್ವಹಿಸಲಾಗುತ್ತಿದೆ.<br>• ಈ ರಸ್ತೆಯ ಕಿಮೀ 0.00 ರಿಂದ 5.00 ಕಿಮೀ ವರೆಗೆ ಜಿಲ್ಲಾ ಮುಖ್ಯ ರಸ್ತೆಯಾಗಿದ್ದು, ಡಾಂಬರು ಮೇಲ್ಮೈ ಹೊಂದಿದ್ದು, ವಾಹನ ಸಂಚಾರಕ್ಕೆ ಯೋಗ್ಯವಾಗಿರುತ್ತದೆ.<br>• ಉಳಿಕೆ ಕಿಮೀ 5.00 ರಿಂದ 14.00 ಕಿಮೀ ವರೆಗಿನ ಒಟ್ಟು 9.00 ಕಿಮೀ ಉದ್ದದ ರಸ್ತೆಯು ಕಾಲುದಾರಿಯಾಗಿದ್ದು, ಅಭಯಾರಣ್ಯ ಪ್ರದೇಶದ ವ್ಯಾಪ್ತಿಯಲ್ಲಿರುತ್ತದೆ. ಸದರಿ ಸರಪಳಿಯನ್ನು ಅಭಿವೃದ್ಧಿಪಡಿಸಲು ಲೋಕೋಪಯೋಗಿ ಇಲಾಖೆಯಿಂದ ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. |
| ಇ) | ಒಂದು ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ ಸಂಪರ್ಕ ಕಲ್ಪಿಸುವುದರಿಂದ ಪ್ರವಾಸಿಗರಿಗೆ ತುಂಬಾ ಅನುಕೂಲವಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೆ ; (ವಿವರ ನೀಡುವುದು) | ಬಂದಿದೆ. |
| ಈ) | ಕಳೆದ ಆಯವ್ಯಯದಲ್ಲಿ ಮಾಗಡಿ - ಸೋಮವಾರಪೇಟೆ ದ್ವಿಪಥ ರಸ್ತೆಗೆ ಅನುದಾನ ನೀಡುವುದಾಗಿ ಘೋಷಣೆ ಮಾಡಿದ್ದು, ಈವರೆವಿಗೂ ಕಾಮಗಾರಿ ಪ್ರಾರಂಭವಾಗದಿರಲು ಕಾರಣವೇನು; ಯಾವಾಗ ಕಾಮಗಾರಿ ಪ್ರಾರಂಭಿಸಲಾಗುತ್ತದೆ? (ಪೂರ್ಣ ವಿವರ ನೀಡುವುದು) | ಸದರಿ ರಸ್ತೆಯನ್ನು ಕೆಶಿಪ್-3 ರ ಯೋಜನೆಯಡಿಯಲ್ಲಿ ಅಭಿವೃದ್ಧಿ ಪಡಿಸಲು ಯೋಜಿಸಲಾಗಿದೆ. ಬಿಡ್ ಅಂಗೀಕಾರ ಪತ್ರವನ್ನು (Letter of Acceptence) ಗುತ್ತಿಗೆದಾರರಿಗೆ ನೀಡಿದ್ದು, ಶೀಘ್ರದಲ್ಲೇ ಕಾಮಾಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು. ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ. |

ಸಂಖ್ಯೆ. ಲೋಇ 123 ಇಎಪಿ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

## ಅನುಬಂಧ

### ಕೆಶಿಪ್-3 ಪ್ಯಾಕೇಜುಗಳ ಕನ್‌ಸೇಷನರ್ಸ್ ಹಾಗೂ ಅಂಗೀಕಾರ ಪತ್ರ (Letter of Acceptence) ವಿವರಣೆಗಳು

| ಕ್ರ.ಸಂ | ಪ್ಯಾಕೇಜ್ ಸಂಖ್ಯೆ. | ಪ್ಯಾಕೇಜ್ ಹೆಸರು | ಕನ್‌ಸೇಷನರ್ ಹೆಸರು ಹಾಗೂ ವಿಳಾಸ | ಅಂಗೀಕಾರ ಪತ್ರ ನೀಡಲಾಗಿರುವ ದಿನಾಂಕ | ಅಂಗೀಕಾರದ ಮೊತ್ತ (ರೂ.ಕೋಟಿಗಳಲ್ಲಿ) |
|---|---|---|---|---|---|
| 1 | ಪ್ಯಾಕೇಜ್-1 | 1(ಎ) ಕೊಳ್ಳೇಗಾಲದಿಂದ ಹನೂರು ವರೆಗೆ (ಕಿಮೀ 0.00 ರಿಂದ ಕಿಮೀ4.90 ವರೆಗೆ (ಕೊಳ್ಳೆಗಾಲ ಹಾಗೂ ಮಧುವನಹಳ್ಳಿ ಬೈಪಾಸ್) ಹಾಗೂ ಕಿಮೀ 66.888 ರಿಂದ ಕಿಮೀ 85.77 ರವರೆಗೆ ರಾಜ್ಯ ಹೆದ್ದಾರಿ-79- ರಸ್ತೆಯ ಉದ್ದ 23.80 ಕಿಮೀ, 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ.<br>1(ಬಿ) ಚಿಂತಾಮಣಿಯಿಂದ ಎ.ಪಿ.ಬಾರ್ಡರ್ -- ಕಿಮೀ 47.203 ರಿಂದ ಕಿಮೀ 86.977 ರಾಜ್ಯ ಹೆದ್ದಾರಿ-82-ಉದ್ದ 39.8 ಕಿಮೀ ಗಳ 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ.<br>1(ಸಿ) ಬೆಂಗಳೂರು (ನೈಸ್ ರಸ್ತೆ) ರಿಂದ ಮಾಗಡಿ ವರೆಗೆ ಕಿಮೀ 15.325 ರಿಂದ ಕಿಮೀ 50.850 ರಾಜ್ಯ ಹೆದ್ದಾರಿ-85- 4 ಪಥದ ರಸ್ತೆ ನಿರ್ಮಾಣ ಹಾಗೂ ಮಾಗಡಿಯಿಂದ ಎನ್.ಹೆಚ್.75 (ವಯಾ ಚಿಕ್ಕಮೂಡಿಗೆರೆ ಹಾಗೂ ಐಯಂದಹಳ್ಳಿ) ಕಿಮೀ 50.850 ರಿಂದ ಕಿಮೀ 66.150 (ಜಿಲ್ಲಾ ಮುಖ್ಯ ರಸ್ತೆ) 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ ಉದ್ದ 50.8 ಕಿಮೀ<br>ಈ ಪ್ಯಾಕೇಜಿನಲ್ಲಿ ಅಭಿವೃದ್ಧಿಪಡಿಸಲಾಗುತ್ತಿರುವ ಒಟ್ಟು ರಸ್ತೆಯ ಉದ್ದ 114.40 ಕಿಮೀ ಗಳನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ರಸ್ತೆಯನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ: ಪ್ಯಾನ್ ಇಂಡಿಯಾ ಇನ್‌ಫ್ರಾ ಪ್ರಾಜೆಕ್ಟ್ ಪ್ರೈ.ಲಿ.<br>ಕಾರ್ಪೊರೇಟ್ ಕಛೇರಿ, 6ನೇ ಮಹಡಿ, ಪ್ಲಾಟ್ ನಂ.19 ಹಾಗೂ 20, ಸೆಕ್ಟರ್ 16ಎ, ಫಿಲಿಮ್ ಸಿಟಿ, ನೊಯಿಡಾ, ಉತ್ತರ ಪ್ರದೇಶ-201301.<br>ಮೊಬೈಲ್ ಸಂಖ್ಯೆ.+9112304849500 | 11-06-2018 | 1062.00 |

| | | | | | |
|---|---|---|---|---|---|
| 2. | ಪ್ಯಾಕೇಜ್-2 | ಮಾಗಡಿಯಿಂದ ಸೋಮವಾರಪೇಟೆ ವರೆಗೆ ಕಿಮೀ 51.00 ರಿಂದ ಕಿಮೀ 221.833 ರಾಜ್ಯ ಹೆದ್ದಾರಿ-85 (ಹುಲಿಯೂರುದುರ್ಗ ಬೈಪಾಸ್ ಕಿಮೀ 76.520 – ಕಿಮೀ 78.410, ರಾಜ್ಯ ಹೆದ್ದಾರಿ-84 ಹಾಗೂ ರಾಷ್ಟ್ರೀಯ ಹೆದ್ದಾರಿ-150ಎ ಗಳಲ್ಲಿನ ರಸ್ತೆಗಳನ್ನು ಹೊರತುಪಡಿಸಿ) ಒಟ್ಟು 166 ಕಿಮೀಗಳ 2 ಪಥದ ರಸ್ತೆ ಹಾಗೂ ಪೇವ್ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ: ಕೆಎನ್‌ಆರ್ ಕನ್‌ಸ್ಟ್ರಕ್ಷನ್ ಲಿ. ಕಾರ್ಪೊರೇಟ್ ಕಛೇರಿ, ಕೆಎನ್‌ಆರ್ ಹೌಸ್, 3ನೇ ಹಾಗೂ 4ನೇ ಮಹಡಿ, ಪ್ಲಾಟ್ ನಂ.144, ಫೇಸ್-1, ಕಾವುರಿ ಹಿಲ್ಸ್, ಹೈದರಾಬಾದ್-500033 ಮೊಬೈಲ್ ಸಂಖ್ಯೆ.+914040268759 | 29-05-2018 | 1144.50 |
| 3. | ಪ್ಯಾಕೇಜ್-3 | ಗದಗ್‌ನಿಂದ ಹೊನ್ನಾಳಿ ವರೆಗೆ ಕಿಮೀ 105.500 ರಿಂದ ಕಿಮೀ 205.290 ರಾಜ್ಯ ಹೆದ್ದಾರಿ-57 ಹಾಗೂ ಕಿಮೀ 215.335 ರಿಂದ 253.713 ರಾಜ್ಯ ಹೆದ್ದಾರಿ-26, ಒಟ್ಟು ಕಿಮೀ 138.20 ಕಿಮೀಗಳ 2 ಪಥದ ರಸ್ತೆ ಹಾಗೂ ಪೇವ್ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ:ಸದ್‌ಭಾವ್ ಇಂಜಿನಿಯರಿಂಗ್ ಲಿ. ಕಾರ್ಪೊರೇಟ್ ಕಛೇರಿ, ಸಧ್‌ಭಾವ್ ಹೌಸ್, ಲಾ ಗಾರ್ಡನ್ ಪೊಲೀಸ್ ಚೌಕಿ ಎದುರು, ಎಲಿಸ್‌ಬ್ರಿಡ್ಜ್, ಅಹಮದಾಬಾದ್-380006 ಮೊಬೈಲ್ ಸಂಖ್ಯೆ.+917926463384 | 29-05-2018 | 995.00 |
| | | | | ಒಟ್ಟು | **3201.50** |

**ಕರ್ನಾಟಕ ವಿಧಾನಸಭೆ**
**15 ನೇ ವಿಧಾನಸಭೆ**
**1ನೇ ಅಧಿವೇಶನ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 160 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಆರ್. ನರೇಂದ್ರ (ಹನೂರು) |
| ಉತ್ತರಿಸುವ ದಿನಾಂಕ | : | 11-07-2018 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2016-17ನೇ ಸಾಲಿನ ಆಯವ್ಯಯದಲ್ಲಿ ಹನೂರು ಮತ್ತು ಕೊಳ್ಳೆಗಾಲ ರಸ್ತೆ ನಿರ್ಮಾಣ ಮಾಡಲು ಕೆಶಿಪ್ ಯೋಜನೆಯಡಿ ಮಂಜೂರು ಮಾಡಿದ್ದು, ಇದುವರೆವಿಗೂ ಕೆಲಸ ಆರಂಭವಾಗದಿರಲು ಕಾರಣಗಳೇನು; (ಸಂಪೂರ್ಣ ವಿವರ ನೀಡುವುದು) | ಸದರಿ ರಸ್ತೆ ಕಾಮಗಾರಿಯನ್ನು ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್) ಹಂತ-3 ರಡಿ ಎಡಿಬಿ ಯೋಜನೆಯಡಿ ಕೈಗೊಳ್ಳಲಾಗುತ್ತಿದ್ದು, ಟೆಂಡರ್ ಪ್ರಕ್ರಿಯೆಗಳನ್ನು ಪೂರ್ಣಗೊಳಿಸುವಲ್ಲಿ ಸಾಕಷ್ಟು ಸಮಯವಾಗಿರುತ್ತದೆ. ಈಗ ಪ್ರಕ್ರಿಯೆ ಪೂರ್ಣಗೊಂಡಿದ್ದು, ಗುತ್ತಿಗೆದಾರರಿಗೆ ಬಿಡ್ ಅಂಗೀಕಾರ ಪತ್ರ (Letter of Acceptence) ನೀಡಿದ್ದು, ಶೀಘ್ರದಲ್ಲೇ ಕಾಮಾಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು. ವಿವರಗಳನ್ನು ಅನುಬಂಧ ದಲ್ಲಿ ಲಗತ್ತಿಸಿದೆ. |
| ಆ) | ಈ ರಸ್ತೆಯು ಸಂಪೂರ್ಣ ಹಾಳಾಗಿದ್ದು, ಆದಷ್ಟು ಬೇಗ ದುರಸ್ಥಿ ಮಾಡಲು ಸರ್ಕಾರ ತೆಗೆದುಕೊಳ್ಳಲಿರುವ ಕ್ರಮಗಳೇನು ? (ವಿವರ ನೀಡುವುದು) | • ಕೊಳ್ಳೇಗಾಲದಿಂದ ಹನೂರುವರೆಗಿನ ರಾಜ್ಯ ಹೆದ್ದಾರಿಯು ಒಟ್ಟು 24.10 ಕಿಮೀ ಉದ್ದವಿರುತ್ತದೆ. ಇದರಲ್ಲಿ ಕೊಳ್ಳೇಗಾಲ-ಹನೂರು ಘಾಟ್ ರಸ್ತೆ ಸರಪಳಿ 0.00 ಯಿಂದ 5.50 ಕಿಮೀ ವರೆಗೆ 5.50 ಕಿಮೀ ಹಾಗೂ ನಂತರ ಶ್ರೀರಂಗಪಟ್ಟಣ-ಮಲ್ಲೈಮಹದೇಶ್ವರ ಬೆಟ್ಟದ ರಸ್ತೆಯ ಸರಪಳಿ 67.00 ರಿಂದ 85.60 ಕಿಮೀ ವರೆಗೆ 18.60 ಕಿಮೀ ಉದ್ದವಿರುತ್ತದೆ.<br>• ಇತ್ತೀಚಿನ ಸತತ ಮಳೆಯಿಂದಾಗಿ ರಸ್ತೆಗಳಲ್ಲಿ ಗುಂಡಿಗಳುಂಟಾಗಿದ್ದು, ಗುಂಡಿಗಳನ್ನು ಮುಚ್ಚುವ ಪ್ರಕ್ರಿಯೆಯನ್ನು ಪ್ರಾರಂಭಿಸಲಾಗಿದೆ.<br>**ಕೊಳ್ಳೇಗಾಲ-ಹನೂರು ಘಾಟ್ ರಸ್ತೆ ಎಸ್.ಹೆಚ್-38ರ ಸರಪಳಿ 0.00 ಯಿಂದ 5.50 ಕಿಮೀ ವರೆಗೆ**<br>• ಪ್ರಸ್ತುತ ಸಾಲಿನಲ್ಲಿ ಸದರಿ ರಸ್ತೆಯ ಮುಂಗಾರು ಪೂರ್ವ ದಿನಗಳ ನಿರ್ವಹಣೆಯನ್ನು ಕೈಗೊಳ್ಳಲು ಅಂದಾಜು ಮೊತ್ತ ರೂ.0.64 ಲಕ್ಷಗಳಿಗೆ ಅಂದಾಜು ಪಟ್ಟಿಯು ಅನುಮೋದನೆಗೊಂಡಿರುತ್ತದೆ. ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಗುತ್ತಿಗೆದಾರರನ್ನು ನೇಮಿಸಿದ ಕೂಡಲೇ ಗುಂಡಿ ಮುಚ್ಚುವ ಕಾಮಗಾರಿಯನ್ನು ತುರ್ತಾಗಿ ಕೈಗೊಂಡು ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿ ಕೊಡಲಾಗುವುದು. |

| | | |
|---|---|---|
| | | **ಶ್ರೀರಂಗಪಟ್ಟಣ–ಮಲೈಮಹದೇಶ್ವರ ಬೆಟ್ಟದ ರಸ್ತೆಯ ರಾಜ್ಯ ಹೆದ್ದಾರಿ –79ರ ಕಿಮೀ 67.00 ರಿಂದ 85.60 ಕಿಮೀ ವರೆಗೆ**<br>• ಪ್ರಸ್ತುತ ಸಾಲಿನಲ್ಲಿ ಮುಂಗಾರು ಪೂರ್ವ ದಿನಗಳ ನಿರ್ವಹಣೆಯನ್ನು ಕೈಗೊಳ್ಳಲು ಸದರಿ ರಸ್ತೆಗೆ ರೂ.4.65 ಲಕ್ಷಗಳು ಅನುಮೋದನೆಯಾಗಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಗುತ್ತಿಗೆದಾರರನ್ನು ನೇಮಿಸಿದ ಕೂಡಲೇ ಗುಂಡಿ ಮುಚ್ಚುವ ಕಾಮಗಾರಿಯನ್ನು ತುರ್ತಾಗಿ ಕೈಗೊಂಡು ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲು ಕ್ರಮ ವಹಿಸಲಾಗುವುದು.<br><br>ಸದರಿ ರಸ್ತೆಯ 3.88 ಕಿಮೀ ಉದ್ದವು ನಿರ್ವಹಣೆ ಅಡಿಯಲ್ಲಿ ಇರುತ್ತದೆ. |

ಸಂಖ್ಯೆ: ಲೋಇ 125 ಇಎಪಿ 2018

(ಹೆಚ್.ಡಿ.ರೇವಣ್ಣ)
ಲೋಕೋಪಯೋಗಿ ಸಚಿವರು

# ಅನುಬಂಧ

## ಕೆಶಿಪ್-3 ಪ್ಯಾಕೇಜುಗಳ ಕನ್‌ಸೇಷನರ್ಸ್ ಹಾಗೂ ಅಂಗೀಕಾರ ಪತ್ರ (Letter of Acceptence) ವಿವರಣೆಗಳು

| ಕ್ರ.ಸಂ | ಪ್ಯಾಕೇಜ್ ಸಂಖ್ಯೆ. | ಪ್ಯಾಕೇಜ್ ಹೆಸರು | ಕನ್‌ಸೇಷನರ್ ಹೆಸರು ಹಾಗೂ ವಿಳಾಸ | ಅಂಗೀಕಾರ ಪತ್ರ ನೀಡಲಾಗಿರುವ ದಿನಾಂಕ | ಅಂಗೀಕಾರದ ಮೊತ್ತ (ರೂ.ಕೋಟಿಗಳಲ್ಲಿ) |
|---|---|---|---|---|---|
| 1 | ಪ್ಯಾಕೇಜ್-1 | 1(ಎ) ಕೊಳ್ಳೇಗಾಲದಿಂದ ಹನೂರು ವರೆಗೆ (ಕಿಮೀ 0.00 ರಿಂದ ಕಿಮೀ4.90 ವರೆಗೆ (ಕೊಳ್ಳೆಗಾಲ ಹಾಗೂ ಮಧುವನಹಳ್ಳಿ ಬೈಪಾಸ್) ಹಾಗೂ ಕಿಮೀ 66.888 ರಿಂದ ಕಿಮೀ 85.77 ರವರೆಗೆ ರಾಜ್ಯ ಹೆದ್ದಾರಿ-79- ರಸ್ತೆಯ ಉದ್ದ 23.80 ಕಿಮೀ, 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ.<br>1(ಬಿ) ಚಿಂತಾಮಣಿಯಿಂದ ಎ.ಪಿ.ಬಾರ್ಡ್‌ರ್ -- ಕಿಮೀ 47.203 ರಿಂದ ಕಿಮೀ 86.977 ರಾಜ್ಯ ಹೆದ್ದಾರಿ-82-ಉದ್ದ 39.8 ಕಿಮೀ ಗಳ 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ.<br>1(ಸಿ) ಬೆಂಗಳೂರು (ನೈಸ್ ರಸ್ತೆ) ರಿಂದ ಮಾಗಡಿ ವರೆಗೆ ಕಿಮೀ 15.325 ರಿಂದ ಕಿಮೀ 50.850 ರಾಜ್ಯ ಹೆದ್ದಾರಿ-85- 4 ಪಥದ ರಸ್ತೆ ನಿರ್ಮಾಣ ಹಾಗೂ ಮಾಗಡಿಯಿಂದ ಎನ್.ಹೆಚ್.75 (ವಯಾ ಚಿಕ್ಕಮೂಡಿಗೆರೆ ಹಾಗೂ ಐಯಂದಹಳ್ಳಿ) ಕಿಮೀ 50.850 ರಿಂದ ಕಿಮೀ 66.150 (ಜಿಲ್ಲಾ ಮುಖ್ಯ ರಸ್ತೆ) 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ ಉದ್ದ 50.8 ಕಿಮೀ<br>ಈ ಪ್ಯಾಕೇಜಿನಲ್ಲಿ ಅಭಿವೃದ್ಧಿಪಡಿಸಲಾಗುತ್ತಿರುವ ಒಟ್ಟು ರಸ್ತೆಯ ಉದ್ದ 114.40 ಕಿಮೀ ಗಳನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ರಸ್ತೆಯನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ: ಪ್ಯಾನ್ ಇಂಡಿಯಾ ಇನ್‌ಫ್ರಾ ಪ್ರಾಜೆಕ್ಟ್ ಪ್ರೈ.ಲಿ.<br>ಕಾರ್ಪೊರೇಟ್ ಕಛೇರಿ, 6ನೇ ಮಹಡಿ, ಪ್ಲಾಟ್ ನಂ.19 ಹಾಗೂ 20, ಸೆಕ್ಟರ್ 16ಎ, ಫಿಲಿಮ್ ಸಿಟಿ, ನೊಯಿಡಾ, ಉತ್ತರ ಪ್ರದೇಶ-201301.<br>ಮೊಬೈಲ್ ಸಂಖ್ಯೆ.+9112304849500 | 11-06-2018 | 1062.00 |

| | | | | | |
|---|---|---|---|---|---|
| 2. | ಪ್ಯಾಕೇಜ್–2 | ಮಾಗಡಿಯಿಂದ ಸೋಮವಾರಪೇಟೆ ವರೆಗೆ ಕಿಮೀ 51.00 ರಿಂದ ಕಿಮೀ 221.833 ರಾಜ್ಯ ಹೆದ್ದಾರಿ–85 (ಹುಲಿಯೂರುದುರ್ಗ ಬೈಪಾಸ್ ಕಿಮೀ 76.520 – ಕಿಮೀ 78.410, ರಾಜ್ಯ ಹೆದ್ದಾರಿ–84 ಹಾಗೂ ರಾಷ್ಟ್ರೀಯ ಹೆದ್ದಾರಿ–150ಎ ಗಳಲ್ಲಿನ ರಸ್ತೆಗಳನ್ನು ಹೊರತುಪಡಿಸಿ) ಒಟ್ಟು 166 ಕಿಮೀಗಳ 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ: ಕೆಎನ್‌ಆರ್ ಕನ್‌ಸ್ಟ್ರಕ್ಷನ್ ಲಿ. ಕಾರ್ಪೊರೇಟ್ ಕಛೇರಿ, ಕೆಎನ್‌ಆರ್ ಹೌಸ್, 3ನೇ ಹಾಗೂ 4ನೇ ಮಹಡಿ, ಪ್ಲಾಟ್ ನಂ.144, ಫೇಸ್–1, ಕಾವುರಿ ಹಿಲ್ಸ್, ಹೈದರಾಬಾದ್–500033 ಮೊಬೈಲ್ ಸಂಖ್ಯೆ.+914040268759 | 29–05–2018 | 1144.50 |
| 3. | ಪ್ಯಾಕೇಜ್–3 | ಗದಗ್‌ನಿಂದ ಹೊನ್ನಾಳಿ ವರೆಗೆ ಕಿಮೀ 105.500 ರಿಂದ ಕಿಮೀ 205.290 ರಾಜ್ಯ ಹೆದ್ದಾರಿ–57 ಹಾಗೂ ಕಿಮೀ 215.335 ರಿಂದ 253.713 ರಾಜ್ಯ ಹೆದ್ದಾರಿ–26, ಒಟ್ಟು ಕಿಮೀ 138.20 ಕಿಮೀಗಳ 2 ಪಥದ ರಸ್ತೆ ಹಾಗೂ ಪೇವ್‌ಡ್ ಶೌಲ್ಡರ್ ಅಳವಡಿಸುವ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಹೈಬ್ರಿಡ್ ಅನ್ಯೂಟಿ ಆಧಾರದಲ್ಲಿ ಅಭಿವೃದ್ಧಿ ಪಡಿಸಲಾಗುತ್ತಿದೆ. | ಮೆ:ಸದ್‌ಭಾವ್ ಇಂಜಿನಿಯರಿಂಗ್ ಲಿ. ಕಾರ್ಪೊರೇಟ್ ಕಛೇರಿ, ಸಧ್‌ಭಾವ್ ಹೌಸ್, ಲಾ ಗಾರ್ಡನ್ ಪೊಲೀಸ್ ಚೌಕಿ ಎದುರು, ಎಲಿಸ್‌ಬ್ರಿಡ್ಜ್ , ಅಹಮದಾಬಾದ್–380006 ಮೊಬೈಲ್ ಸಂಖ್ಯೆ.+917926463384 | 29–05–2018 | 995.00 |
| | | | | ಒಟ್ಟು | **3201.50** |

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 395 |
| ಸದಸ್ಯರ ಹೆಸರು | ಶ್ರೀ ಎಂ.ಕೃಷ್ಣಾರೆಡ್ಡಿ (ಚಿಂತಾಮಣಿ) |
| ಉತ್ತರಿಸಬೇಕಾದ ದಿನಾಂಕ | 11/07/2018 |
| ಉತ್ತರಿಸುವವರು | ಪೌರಾಡಳಿತ, ಸ್ಥಳೀಯ ಸಂಸ್ಥೆಗಳು, ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಚಿಂತಾಮಣಿ ನಗರದಲ್ಲಿ ಒಕ್ಕಲಿಗರ ಹಾಸ್ಟೆಲ್‌ಗೆ ಮಂಜೂರು ಮಾಡಿರುವ ಜಮೀನಿನಲ್ಲಿ ಒಕ್ಕಲಿಗರ ಸಂಘ ಟ್ರಸ್ಟ್ ಮತ್ತು ಶ್ರೀ ಎಂ.ಸಿ. ಆಂಜನೇಯರೆಡ್ಡಿ ಕಲ್ಯಾಣ ಮಂಟಪ ಎಂದು ನಗರಸಭೆಯಲ್ಲಿ ಅನಧಿಕೃತವಾಗಿ ಖಾತೆಯನ್ನು ತೆರೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಚಿಂತಾಮಣಿ ನಗರದಲ್ಲಿ ಒಕ್ಕಲಿಗರ ಹಾಸ್ಟೆಲ್‌ಗೆ ಮಂಜೂರು ಮಾಡಿರುವ ಜಮೀನಿನಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯ ಚಿಂತಾಮಣಿ, ವಕ್ಕಲಿಗರ ಸಂಘ ಟ್ರಸ್ಟ್ ಮತ್ತು ಕಲ್ಯಾಣ ಮಂಟಪ ಎಂದು ನಗರಸಭೆಯಲ್ಲಿ ಖಾತೆಯನ್ನು ತೆರೆದಿರುತ್ತಾರೆ. (ವಿವರ ಅನುಬಂಧ-1 ಲಗತ್ತಿಸಿದೆ). |
| (ಆ) | ಹಾಗಿದ್ದಲ್ಲಿ, ಪ್ರಸ್ತುತ ಇಲ್ಲಿ ಒಕ್ಕಲಿಗರ ಹಾಸ್ಟೆಲ್ ಕಾರ್ಯ ನಿರ್ವಹಿಸುತ್ತಿದೆಯೇ; ಅಥವಾ ಇಲ್ಲವೇ, (ವಿವರ ನೀಡುವುದು) | ಪ್ರಸ್ತುತ ಇಲ್ಲಿ ಒಕ್ಕಲಿಗರ ಹಾಸ್ಟೆಲ್ ಕಾರ್ಯ ನಿರ್ವಹಿಸುತ್ತಿರುವುದಿಲ್ಲ. |
| (ಇ) | ಅನಧಿಕೃತವಾಗಿ ಒಕ್ಕಲಿಗರ ಸಂಘ ಟ್ರಸ್ಟ್ ಮತ್ತು ಶ್ರೀ ಎಂ.ಸಿ. ಆಂಜನೇಯರೆಡ್ಡಿ ಕಲ್ಯಾಣ ಮಂಟಪ ಹೆಸರಿಗೆ ಖಾತೆ ತೆರೆದಿರುವುದನ್ನು ರದ್ದು ಪಡಿಸಲು ಕೈಗೊಂಡಿರುವ ಕ್ರಮಗಳೇನು? | ಅಧ್ಯಕ್ಷರು, ಒಕ್ಕಲಿಗ ಸಂಘ ಚಿಂತಾಮಣಿರವರಿಗೆ ಸದರಿ ವಿಷಯಕ್ಕೆ ಸಂಬಂಧಪಟ್ಟಂತೆ ದಾಖಲೆಗಳನ್ನು ಹಾಜರುಪಡಿಸಲು ಈಗಾಗಲೇ ನೋಟೀಸನ್ನು ಜಾರಿ ಮಾಡಲಾಗಿದೆ (ಅನುಬಂಧ-2). ಈ ಕುರಿತು ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 222ರನ್ವಯ ನಿಯಮಾನುಸಾರ ಪರಿಶೀಲಿಸಿ, ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 165 ಜಿಇಎಲ್ 2018

(ರಮೇಶ್ ಲ. ಜಾರಕೀಹೊಳಿ)
ಪೌರಾಡಳಿತ, ಸ್ಥಳೀಯ ಸಂಸ್ಥೆಗಳು,
ಹಾಗೂ ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು

**ಕರ್ನಾಟಕ ವಿಧಾನಸಭೆ**
**15 ನೇ ವಿಧಾನಸಭೆ**
**1ನೇ ಅಧಿವೇಶನ**
**(ಮುಂದುವರೆದ ಉಪವೇಶನಗಳು)**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. | : | 163 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಎಸ್. ಕುಮಾರ್ ಬಂಗಾರಪ್ಪ (ಸೊರಬ) |
| ಉತ್ತರಿಸುವ ದಿನಾಂಕ | : | 11-07-2018 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸೊರಬ ಕ್ಷೇತ್ರದಲ್ಲಿ ಕೆ.ಶಿಪ್ ಯೋಜನೆಯಡಿಯಲ್ಲಿ ನಡೆಯುತ್ತಿರುವ ರಸ್ತೆಗಳು ಯಾವುವು ? (ವಿವರಗಳನ್ನು ಒದಗಿಸುವುದು) ; | ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ -2ರಲ್ಲಿ ವಿಶ್ವಬ್ಯಾಂಕ್ ನೆರವಿನಿಂದ ಶಿಕಾರಿಪುರ-ಆನವಟ್ಟಿ-ಹಾನಗಲ್ (WAEP3B Package) ವರೆಗೆ ಒಟ್ಟು 71.63 ಕಿಮೀ ಉದ್ದದ ರಸ್ತೆ ಮೇಲ್ದರ್ಜೆಗೇರಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ಮೆ: ಆರ್.ಎನ್. ಶೆಟ್ಟಿ ಇನ್‌ಫ್ರಾಸ್ಟ್ರಕ್ಚರ್ ಲಿ., ಹುಬ್ಬಳ್ಳಿ, ರವರಿಗೆ ರೂ.224.70 ಕೋಟಿಗಳ ಮೊತ್ತಕ್ಕೆ ವಹಿಸಲಾಗಿದೆ. ಕಾಮಗಾರಿಯನ್ನು 01-10-2015 ರಂದು ಪ್ರಾರಂಭಿಸಲಾಗಿದೆ. ಈ ಕಾಮಗಾರಿಯನ್ನು ನವೆಂಬರ್ 2018 ರಲ್ಲಿ ಮುಕ್ತಾಯಗೊಳಿಸಲು ಯೋಜಿಸಲಾಗಿದೆ.<br><br>ಸೊರಬ ಕ್ಷೇತ್ರದಲ್ಲಿ ಒಟ್ಟು 21.00 ಕಿಮೀ ನಷ್ಟು ರಸ್ತೆ ಹಾದು ಹೋಗುತ್ತದೆ. ಇದರಲ್ಲಿ 19.50 ಕಿಮೀ ರಸ್ತೆ ಕಾಮಗಾರಿ ಮುಗಿದಿರುತ್ತದೆ. |
| ಆ) | ಈ ಕಾಮಗಾರಿಗಳನ್ನು ಯಾವಾಗ ಪೂರ್ಣಗೊಳಿಸಲಾಗುವುದು ? | ಸದರಿ ಕಾಮಗಾರಿಯನ್ನು ನವೆಂಬರ್ 2018ರ ಅಂತ್ಯದಲ್ಲಿ ಪೂರ್ಣಗೊಳಿಸಲಾಗುವುದು. |

ಸಂಖ್ಯೆ: ಲೋಇ 124 ಇಎಪಿ 2018

(ಹೆಚ್.ಡಿ.ರೇವಣ್ಣ)
ಲೋಕೋಪಯೋಗಿ ಸಚಿವರು

ಕರ್ನಾಟಕ ವಿಧಾನಸಭೆ
15 ನೇ ವಿಧಾನಸಭೆ
1ನೇ ಅಧಿವೇಶನ
(ಮುಂದುವರೆದ ಉಪವೇಶನಗಳು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 458
ಮಾನ್ಯ ಸದಸ್ಯರ ಹೆಸರು : ಶ್ರೀ. ಅಂಗಾರ ಎಸ್. (ಸುಳ್ಯ)
ಉತ್ತರಿಸುವ ದಿನಾಂಕ : 11-07-2018
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಬಂಟ್ವಾಳ ರಾಜ್ಯ ಹೆದ್ದಾರಿಯ ಸಂಪಾಜೆಯಿಂದ ಪೆರ್ನಾಣಿಯ ಭಾಗದ ರಸ್ತೆ ಪರಂಬೋಕು ಜಮೀನಿನಲ್ಲಿ ಅನಧಿಕೃತವಾಗಿ ಒತ್ತುವರಿ ಮಾಡಿ ಕಟ್ಟಡ ನಿರ್ಮಾಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಬಂದಿರುವುದಿಲ್ಲ. |
| ಆ) | ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಳ್ಳಲಿರುವ ಕ್ರಮವೇನು (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ.<br><br>ಆದಾಗ್ಯೂ ಸದರಿ ರಸ್ತೆಯ ಬದಿಯಲ್ಲಿ ಅನಧಿಕೃತ ಕಟ್ಟಡಗಳಿರುವುದು ಕಂಡು ಬಂದಲ್ಲಿ ಅವುಗಳನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಮಳೆಯ ನೀರು ರಸ್ತೆಯಲ್ಲಿ ಹರಿದು ಪೈಚಾರು ಎಂಬ ಭಾಗದಲ್ಲಿ ವಾಹನ ಸಂಚಾರ ಜನ ಸಂಪರ್ಕಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಹಾಗಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮವೇನು: (ವಿವರ ನೀಡುವುದು) | ದುರಸ್ತಿ ಕಾಮಗಾರಿಗಳು ಪ್ರಗತಿಯಲ್ಲಿದೆ. (ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.) |

ಸಂಖ್ಯೆ: ಲೋಇ 129 ಇಎಪಿ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಅನುಬಂಧ

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ.ಅಂಗಾರ ಎಸ್, ಸುಳ್ಯ ವಿಧಾನ ಸಭಾ ಕ್ಷೇತ್ರ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 458. ಪೂರಕ ಟಿಪ್ಪಣಿ.

- ಮೈಸೂರು – ಬಂಟ್ವಾಳ ರಸ್ತೆ (ರಾಜ್ಯ ಹೆದ್ದಾರಿ–88). ಸಂಪಾಜೆಯಿಂದ ಮಾಣಿಯವರೆಗೆ (71.60 ಕಿ.ಮೀ) ಸರಪಳಿ ಕಿ.ಮೀ.148+500 ರಿಂದ ಕಿ.ಮೀ220+400 (ಪ್ಯಾಕೇಜ್–ಸಿ) ಕಾಮಗಾರಿಯನ್ನು ಮೆ॥ ಕೆ.ಎಂ.ಸಿ ಕನ್ಸ್‌ಟ್ರಕ್ಷನ್. ಹೈದರಾಬಾದ್ ಇವರಿಗೆ ಗುತ್ತಿಗೆ ಕರಾರು ದಿನಾಂಕ: 30.11.2009 ರಂದು ಗುತ್ತಿಗೆ ಮೊತ್ತ ರೂ. 176.62 ಕೋಟಿಗಳಿಗೆ ವಹಿಸಲಾಗಿರುತ್ತದೆ.
- ಕಾಮಗಾರಿಯು ದಿ:31.05.2015 ರಂದು ಪೂರ್ಣಗೊಂಡಿದ್ದು, ನ್ಯೂನತೆ ಹೊಣೆಗಾರಿಕೆ ಅವಧಿ (Defect Liability Period) ಮತ್ತು ರಸ್ತೆ ನಿರ್ವಹಣಾ ಅವಧಿಯು (Maintenance Period) ದಿ:31.03.2018 ರಂದು ಪೂರ್ಣಗೊಂಡಿರುತ್ತದೆ.
- ನಿರ್ವಹಣಾ ಕಾಮಗಾರಿಗಳನ್ನು ಗುತ್ತಿಗೆದಾರರು ಪೂರ್ಣಗೊಳಿಸಬೇಕಾಗಿರುವುದರಿಂದ ಇವರ ದುರಸ್ತಿ ಕಾಮಗಾರಿ (ರಸ್ತೆ ಗುಂಡಿ ಮುಚ್ಚುವುದು, ರಸ್ತೆಯ ಭುಜಗಳನ್ನು ಸರಿಪಡಿಸುವುದು. ಚರಂಡಿಯಲ್ಲಿನ ಹೂಳು ತೆಗೆಯುವುದು ಇತರೆ) ಪ್ರಗತಿಯಲ್ಲಿದ್ದು, ಪೂರ್ಣಗೊಂಡ ನಂತರ ರಾಷ್ಟ್ರೀಯ ಹೆದ್ದಾರಿ ವಲಯಕ್ಕೆ ಹಸ್ತಾಂತರಿಸಲು ಕ್ರಮಕೈಗೊಳ್ಳಲಾಗುವುದು.

**ಕರ್ನಾಟಕ ವಿಧಾನಸಭೆ**
**15 ನೇ ವಿಧಾನಸಭೆ**
**1ನೇ ಅಧಿವೇಶನ**
**(ಮುಂದುವರೆದ ಉಪವೇಶನಗಳು)**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 478
ಮಾನ್ಯ ಸದಸ್ಯರ ಹೆಸರು : ಶ್ರೀ. ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸುವ ದಿನಾಂಕ : 11-07-2018
ಉತ್ತರಿಸುವ ಸಚಿವರು : ಲೋಕೋಪಯೋಗಿ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದಲ್ಲಿ ಬರುವ ಸಂಗೋಳ್ಳಿ-ಬೇವಿನಕೊಪ್ಪ ಮಧ್ಯದಲ್ಲಿ ಮಲಪ್ರಭ ನದಿಗೆ ಸೇತುವೆಯನ್ನು ನಿರ್ಮಿಸಲು ಮಂಜೂರಾದ ಅನುದಾನವೆಷ್ಟು; | ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕು ಅಮತೂರು-ಬೇವಿನಕೊಪ್ಪ-ಸಂಗೊಳ್ಳಿ ರಸ್ತೆ ಕಿಮೀ 4.00 ರಲ್ಲಿ ಮಲಪ್ರಭ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾಮಗಾರಿಯನ್ನು ರೂ. 40.00 ಕೋಟಿಗಳ ಅಂದಾಜು ಮೊತ್ತದಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಕೈಗೊಳ್ಳಲಾಗಿರುತ್ತದೆ. |
| ಆ) | ಸದರಿ ಸೇತುವೆ ಕಾಮಗಾರಿಯನ್ನು ಇದುವರೆಗೂ ಪ್ರಾರಂಭಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ವಿವರ ನೀಡುವುದು) | ಸದರಿ ಸೇತುವೆ ನಿರ್ಮಾಣಕ್ಕೆ ದಿ: 19.03.2018 ರಂದು ಕಾರ್ಯದೇಶ ನೀಡಿರುತ್ತದೆ.<br>ಸೇತುವೆ ಕಾಮಗಾರಿಯನ್ನು ಗುತ್ತಿಗೆದಾರರ ಸ್ವಂತ ವಿನ್ಯಾಸದಡಿಯಲ್ಲಿ ಟರ್ನ್ ಕೀ ಆಧಾರದ ಮೇಲೆ ವಹಿಸಿರುವುದರಿಂದ ಗುತ್ತಿಗೆದಾರರು ಕಾಮಗಾರಿ ಕೈಗೆತ್ತಿಕೊಳ್ಳುವ ಮುನ್ನ, ಅಗತ್ಯವಿರುವ ಸರ್ವೆಕಾರ್ಯ, ಮಣ್ಣಿನ ಪರಿಶೀಲನೆ, ವಿನ್ಯಾಸ ಹಾಗೂ ಇತರ ತನಿಖೆಗಳು ಪ್ರಗತಿಯಲ್ಲಿವೆ. (ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ.) |
| ಇ) | ಹಾಗಿದ್ದಲ್ಲಿ, ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? | ಅಗತ್ಯವಿರುವ ತನಿಖೆಗಳು ಪೂರ್ಣಗೊಂಡ ನಂತರ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು. |

ಸಂಖ್ಯೆ. ಲೋಇ 127 ಇಎಪಿ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

# ಅನುಬಂಧ

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 478 ಕ್ಕೆ ಪೂರಕ ಟಿಪ್ಪಣಿ**

- ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕು ಅಮಟೂರು-ಬೇವಿನಕೊಪ್ಪ-ಸಂಗೊಳ್ಳಿ ರಸ್ತೆ ಕಿ.ಮೀ 4.00 ರಲ್ಲಿ ಮಲಪ್ರಭ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾಮಗಾರಿಗೆ ಅಂದಾಜು ವೆಚ್ಚ ರೂ. 40.00 ಕೋಟಿ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ. ಲೋಇ 34 ಇಎಪಿ 2014, ದಿನಾಂಕ 31-01-2017 ರಂದು ನೀಡಿದ್ದು, ಕಾಮಗಾರಿಯನ್ನು ಟರ್ನ್‌ಕೀ ಆಧಾರದ ಮೇರೆಗೆ ಗುತ್ತಿಗೆದಾರರ ಸ್ವಂತ ವಿನ್ಯಾಸದಡಿಯಲ್ಲಿ ತೆಗೆದುಕೊಳ್ಳುವ ಷರತ್ತಿನೊಂದಿಗೆ ಅನುಮೋದನೆ ನೀಡಿರುತ್ತದೆ.

- ಅದರಂತೆ, ಟೆಂಡರ್ ಮುಖೇನ ಮೆ॥ ಬಿ.ಎಸ್.ಆರ್. ಇನ್‌ಪ್ರಾಟೆಕ್ ಇಂಡಿಯಾ ಲಿಮಿಟೆಡ್, ಬೆಂಗಳೂರು ಇವರಿಗೆ ರೂ 28.75 ಕೋಟಿಗಳ ಗುತ್ತಿಗೆ ಮೊತ್ತಕ್ಕೆ ಸದರಿ ಸೇತುವೆಯನ್ನು ನಿರ್ಮಿಸಲು ದಿ: 08-03-2018 ರಂದು ಗುತ್ತಿಗೆ ಕರಾರು ಒಪ್ಪಂದದವನ್ನು ಮಾಡಿಕೊಂಡು ದಿ: 19-03-2018 ರಂದು ಕಾರ್ಯದೇಶವನ್ನು ನೀಡಿರುತ್ತದೆ.

- ಸದರಿ ಸೇತುವೆ ಕಾಮಗಾರಿಯನ್ನು ಪ್ರಾರಂಭಿಕ ದಿ: 19-03-2018 ರಂದು ಪ್ರಾರಂಭಿಸಿದ್ದು, ಗುತ್ತಿಗೆ ಕರಾರಿನ್ವಯ ಕಾಮಗಾರಿಯನ್ನು ಪೂರ್ಣಗೊಳಿಸಲು 30 ತಿಂಗಳ (ಮಳೆಗಾಲ ಸೇರಿ) ಕಾಲಾವಧಿಯನ್ನು ನೀಡಲಾಗಿರುತ್ತದೆ.

- ಈ ಸೇತುವೆ ಕಾಮಗಾರಿಯನ್ನು ಟರ್ನ್‌ಕೀ ಆಧಾರದ ಮೇರೆಗೆ ಗುತ್ತಿಗೆದಾರರ ಸ್ವಂತ ವಿನ್ಯಾಸದಡಿಯಲ್ಲಿ ತೆಗೆದುಕೊಳ್ಳಬೇಕಾಗಿರುವುದರಿಂದ ಕಾಮಗಾರಿಯನ್ನು ತೆಗೆದುಕೊಳ್ಳುವ ಮುನ್ನ ಅಗತ್ಯವಿರುವ ಸರ್ವೆಕಾರ್ಯ, ಮಣ್ಣಿನ ಪರಿಶೀಲನೆ, ವಿನ್ಯಾಸ ಹಾಗೂ ಇತರ ತನಿಖೆಗಳನ್ನು ಗುತ್ತಿಗೆದಾರರು ಕೈಗೆತ್ತಿಕೊಂಡಿದ್ದು ಪ್ರಗತಿಯಲ್ಲಿವೆ.

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಅನಿಲ್ ಕುಮಾರ್ ಸಿ (ಹೆಚ್.ಡಿ.ಕೋಟೆ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 473

ಉತ್ತರಿಸಬೇಕಾದವರು : ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

ಉತ್ತರಿಸಬೇಕಾದ ದಿನಾಂಕ : 11.07.2018

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪುರಸಭೆ ಹಾಗೂ ಸರಗೂರು ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಒಳಚರಂಡಿ ಹಾಗೂ ಶಾಶ್ವತ ಕುಡಿಯುವ ನೀರಿನ ಸೌಲಭ್ಯದ ವ್ಯವಸ್ಥೆಗಾಗಿ ಸರ್ಕಾರದ ವತಿಯಿಂದ ಕೈಗೊಂಡಿರುವ ಕ್ರಮಗಳೇನು; | **ಹೆಚ್.ಡಿ.ಕೋಟೆ ಪಟ್ಟಣ:-**<br>ಹೆಚ್.ಡಿ.ಕೋಟೆ ಪಟ್ಟಣದ ಪ್ರಸಕ್ತ ಜನಸಂಖ್ಯೆಯು ಸುಮಾರು 15600 ಇದ್ದು 2.50 ಎಂ.ಎಲ್.ಡಿ. ಬೇಡಿಕೆ ಇರುತ್ತದೆ. ಕಬಿನಿ ನದಿ ಮೂಲದಿಂದ 2.84 ಎಂ.ಎಲ್.ಡಿ ಸಾಮರ್ಥ್ಯದ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸ್ಥಳೀಯ ಸಂಸ್ಥೆಯ ವತಿಯಿಂದ ನಿರ್ವಹಣೆ ಮಾಡಲಾಗುತ್ತಿದ್ದು, ಹಾಲಿ ದಿನಂಪ್ರತಿ ತಲಾ 70 ಲೀಟರ್‌ನಂತೆ ನೀರನ್ನು ಸರಬರಾಜು ಮಾಡಲಾಗುತ್ತಿದೆ.<br><br>**ಸರಗೂರು ಪಟ್ಟಣ:-**<br>ಸರಗೂರು ಪಟ್ಟಣದ ಪ್ರಸಕ್ತ ಜನಸಂಖ್ಯೆಯು ಸುಮಾರು 12500 ಇದ್ದು 2.00 ಎಂ.ಎಲ್.ಡಿ. ಬೇಡಿಕೆ ಇರುತ್ತದೆ. ಕಬಿನಿ ನದಿ ಮೂಲದಿಂದ 2.00 ಎಂ.ಎಲ್.ಡಿ ಸಾಮರ್ಥ್ಯದ ಕುಡಿಯುವ ನೀರು ಸರಬರಾಜು ವ್ಯವಸ್ಥೆಯನ್ನು ಸ್ಥಳೀಯ ಸಂಸ್ಥೆಯ ವತಿಯಿಂದ ನಿರ್ವಹಣೆ ಮಾಡಲಾಗುತ್ತಿದ್ದು, ಹಾಲಿ ದಿನಂಪ್ರತಿ ತಲಾ 70 ಲೀಟರ್‌ನಂತೆ ನೀರನ್ನು ಸರಬರಾಜು ಮಾಡಲಾಗುತ್ತಿದೆ.<br>ಈ ಪಟ್ಟಣಗಳಿಗೆ ಶಾಶ್ವತ ಕುಡಿಯುವ ನೀರಿನ ಸೌಲಭ್ಯದ ವ್ಯವಸ್ಥೆಗಾಗಿ ಯೋಜನೆ ರೂಪಿಸಲು ಸಂಭಂದಿಸಿದ ಸ್ಥಳೀಯ ಸಂಸ್ಥೆಗಳಿಂದ ಯಾವುದೇ ಬೇಡಿಕೆ ಬಂದಿರುವುದಿಲ್ಲ. |
| ಆ | ಈ ಎರಡು ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಒಳಚರಂಡಿ ಹಾಗೂ ಕುಡಿಯುವ ನೀರಿನ ಪೂರೈಕೆ ವ್ಯವಸ್ಥೆಗಾಗಿ ಹೊಸ ಯೋಜನೆಗಳ ಪ್ರಸ್ತಾವನೆ ಸರ್ಕಾರಕ್ಕೆ ಸ್ವೀಕೃತವಾಗಿರುವುದೇ (ಸ್ವೀಕೃತವಾಗಿರುವ ಯೋಜನೆಗಳ ವಿವರ ನೀಡುವುದು) ಈ ಯೋಜನೆಗಳಿಗೆ ಮಂಜೂರಾತಿ ಪ್ರಕ್ರಿಯೆ ಯಾವ ಹಂತದಲ್ಲಿದೆ ? | ಈ ಬಗ್ಗೆ ಸರ್ಕಾರದ ಹಂತದಲ್ಲಿ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |

ನಅಇ 45 ಯುಡಬ್ಲ್ಯೂಎಲ್ 2018

(ಯು.ಟಿ. ಖಾದರ್)
ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ.

ಪ್ರಶ್ನೆ ಸಂಖ್ಯೆ : 687

ಉತ್ತರಿಸಬೇಕಾದವರು : ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

ಉತ್ತರಿಸಬೇಕಾದ ದಿನಾಂಕ : 11-07-2018

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಹುಬ್ಬಳ್ಳಿ-ಧಾರವಾಡ ಪಶ್ಚಿಮ ಕ್ಷೇತ್ರದಲ್ಲಿ ಜಲಮಂಡಳಿ, ಮಹಾನಗರ ಪಾಲಿಕೆ ಹಾಗೂ ಇತರೆ ಇಲಾಖೆಗಳಿಂದ ಕುಡಿಯುವ ನೀರಿಗಾಗಿ ಕಳೆದ 3 ವರ್ಷಗಳಲ್ಲಿ ಒಟ್ಟು ಎಷ್ಟು ಬೋರ್‌ವೆಲ್‌ಗಳನ್ನು ಕೊರೆಯಲಾಗಿದೆ; (ವಾರ್ಡ್‌ವೈಸ್ ವಿವರ ನೀಡುವುದು) | ಹುಬ್ಬಳ್ಳಿ-ಧಾರವಾಡ ಪಶ್ಚಿಮ ವಿಧಾನ ಸಭಾ ಕ್ಷೇತ್ರದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಕುಡಿಯುವ ನೀರಿಗಾಗಿ ಕಳೆದ 3 ವರ್ಷಗಳಲ್ಲಿ (ಸನ್ 2015 ರಿಂದ 2018 ರವರೆಗೆ) ಒಟ್ಟು 137 ಕೊಳವೆ ಬಾವಿಗಳನ್ನು ಕೊರೆಯಲಾಗಿದೆ. ವಾರ್ಡ್‌ವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. 132 ಕೊಳವೆ ಬಾವಿಗಳು ಸಫಲವಾಗಿರುತ್ತದೆ ಹಾಗೂ 5 ಕೊಳವೆ ಬಾವಿಗಳು ವಿಫಲವಾಗಿರುತ್ತದೆ. |
| ಆ | ಇದರಲ್ಲಿ ಎಷ್ಟು ಬೋರ್‌ವೆಲ್‌ಗಳು ಚಾಲ್ತಿಯಲ್ಲಿವೆ; | ಇದರಲ್ಲಿ 132 ಸಂಖ್ಯೆಯ ಕೊಳವೆ ಬಾವಿಗಳು ಚಾಲ್ತಿಯಲ್ಲಿರುತ್ತವೆ. |
| ಇ | ಸ್ಥಗಿತಗೊಂಡಿರುವ ಬೋರ್‌ವೆಲ್‌ಗಳನ್ನು ಚಾಲ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮವೇನು; ಇದಕ್ಕೆ ಎಷ್ಟು ಸಮಯ ಬೇಕಾಗುತ್ತದೆ? | ಹುಬ್ಬಳ್ಳಿ-ಧಾರವಾಡ ಪಶ್ಚಿಮ ವಿಧಾನ ಸಭಾ ಕ್ಷೇತ್ರದಲ್ಲಿ ಯಾವುದೇ ಕೊಳವೆ ಬಾವಿಗಳು ಸ್ಥಗಿತಗೊಂಡಿರುವುದಿಲ್ಲ. |

ನಅಇ 59 ಯುಡಬ್ಲ್ಯೂಎಲ್ 2018

(ಯು.ಟಿ. ಖಾದರ್)
ನಗರಾಭಿವೃದ್ಧಿ ಹಾಗೂ ವಸತಿ ಸಚಿವರು

# ಅನುಬಂಧ

**ಹುಬ್ಬಳ್ಳಿ–ಧಾರವಾಡ ಪಶ್ಚಿಮ ವಿಧಾನಸಭಾ ಕ್ಷೇತ್ರದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮಂಡಳಿಯಿಂದ ಕಳೆದ 3 ವರ್ಷಗಳಲ್ಲಿ ಕೊರೆಯಲಾದ ಕೊಳವೆ ಬಾವಿಗಳ ವಿವರಗಳು:**

| ಧಾರವಾಡ ನಗರ: | | | |
|---|---|---|---|
| ವಾರ್ಡ ಸಂಖ್ಯೆ | ಒಟ್ಟು | ಸಫಲ | ವಿಫಲ |
| 1 | 12 | 12 | – |
| 2 | 4 | 4 | – |
| 11 | – | – | – |
| 12 | 5 | 5 | – |
| 13 | 3 | 3 | – |
| 14 | 2 | 2 | – |
| 15 | 3 | 3 | – |
| 16 | 3 | 3 | – |
| 17 | 10 | 10 | – |
| 18 | 6 | 6 | – |
| 19 | – | – | – |
| 20 | 10 | 10 | – |
| 21 | 7 | 7 | – |
| 22 | 26 | 26 | – |
| 23 | 9 | 9 | – |
| 24 | 9 | 9 | – |
| **ಒಟ್ಟು** | **109** | **109** | – |
| ಹುಬ್ಬಳ್ಳಿ ನಗರ: | | | |
| 36 | 4 | 4 | – |
| 37 | 9 | 5 | 4 |
| 38 | 6 | 6 | – |
| 39 | 9 | 8 | 1 |
| **ಒಟ್ಟು** | **28** | **23** | **5** |
| **ಒಟ್ಟು (ಹು+ಧಾ)** | **137** | **132** | **5** |

# ಕರ್ನಾಟಕ ವಿಧಾನ ಸಭೆ



ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ - 496
ಉತ್ತರಿಸಬೇಕಾದ ದಿನಾಂಕ - 11.07.2018
ಸದಸ್ಯರ ಹೆಸರು - ಶ್ರೀ ಬಿ.ನಾಗೇಂದ್ರ(ಬಳ್ಳಾರಿ)

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ವಸತಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಮಂಜೂರು ಮಾಡಿರುವ ಮನೆಗಳು ಎಷ್ಟು? (ಜಿಲ್ಲಾವಾರು, ಯೋಜನೆವಾರು, ವರ್ಷವಾರು ವಿವರ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ವಸತಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಒಟ್ಟು 1735221 ಮನೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br><br>ಜಿಲ್ಲಾವಾರು, ಯೋಜನೆವಾರು, ವರ್ಷವಾರು ವಿವಿದ **ಅನುಬಂಧ-1** ರಲ್ಲಿ ಒದಗಿಲಾಗಿದೆ. |
| ಆ) | ಕಳೆದ ಮೂರು ವರ್ಷಗಳಿಂದ ವಿವಿಧ ವಸತಿ ಯೋಜನೆಯ ಅಡಿಯಲ್ಲಿ ಮಂಜೂರಾದ ಮನೆಗಳನ್ನು ಬ್ಲಾಕ್ ಲೀಸ್ಟ್‌ಗೆ ಸೇರಿಸಲಾಗಿದೆಯೇ? ತಡೆಹಿಡಿಯಲು ಕಾರಣಗಳೇನು; (ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳ ವಿವರ ನೀಡುವುದು) | ಹೌದು.<br><br>ವಸತಿ ಯೋಜನೆಯ ಮಾರ್ಗಸೂಚಿಗಳ ಪ್ರಕಾರ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗಳು ನಿಗಮದ ಅನುಮೋದನೆ ಪಡೆದ ದಿನಾಂಕದ ನಂತರ 90 ದಿನಗಳೊಳಗೆ ತನ್ನ ಮನೆಯ ಕಾಮಗಾರಿಯನ್ನು ಪ್ರಾರಂಭಿಸಿಕೊಳ್ಳಬೇಕಿರುತ್ತದೆ. ಒಂದು ವೇಳೆ ಈ ಅವಧಿಯೊಳಗೆ ಫಲಾನುಭವಿಯು ಮನೆಯನ್ನು ಪ್ರಾರಂಭ ಮಾಡಿಕೊಳ್ಳದಿದ್ದಲ್ಲಿ ಮನೆಯನ್ನು ರದ್ದುಪಡಿಸಲು ಅವಕಾಶ ಕಲ್ಪಿಸಲಾಗಿದೆ.<br><br>ಆದಾಗ್ಯೂ ಸಹ ಮನೆ ನಿರ್ಮಾಣದಲ್ಲಿ ಫಲಾನುಭವಿಗೆ ಇರುವ ವೈಯುಕ್ತಿಕ ಸಮಸ್ಯೆಗಳು, ಮಳೆಗಾಲ, ಆರ್ಥಿಕ ಸಮಸ್ಯೆಗಳು, ಬಡತನ ಮುಂತಾದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಫಲಾನುಭವಿಗೆ ತಿಳುವಳಿಕೆ ಪತ್ರಗಳನ್ನು ಜಾರಿ ಮಾಡುವ ಮೂಲಕ ಅವರ ಮನವೊಲಿಸಿ ಮನೆ ನಿರ್ಮಾಣಕ್ಕೆ ಒತ್ತು ನೀಡಲಾಗಿದೆ ಹಾಗೂ ಅನೇಕ ವಿಡಿಯೋ ಕಾನ್ಫರೆನ್ಸ್ ಮತ್ತು ಪ್ರಗತಿ ಪರಿಶೀಲನಾ ಸಭೆಗಳಲ್ಲಿ ಪ್ರಾರಂಭವಾಗದ ಮನೆಗಳನ್ನು ಕೂಡಲೇ ಪ್ರಾರಂಭಿಸಲು ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಲು ತಿಳಿಸಲಾಗಿದೆ.<br><br>ಅಲ್ಲದೇ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಮೂಲಕ ಸಾಕಷ್ಟು ತಿಳುವಳಿಕೆ ಪತ್ರಗಳನ್ನು ನೀಡಿದ್ದಾಗ್ಯೂ ಸುಮಾರು ಮನೆಗಳು ಪ್ರಾರಂಭವಾಗಿರುವುದಿಲ್ಲ. ಅಂತಹ ಆಯ್ಕೆಗಳನ್ನು ರದ್ದುಪಡಿಸಲಾಗಿದೆ.<br><br>ತಾಲ್ಲೂಕುಗಳ ವಿವರವನ್ನು **ಅನುಬಂಧ-2**ರಲ್ಲಿ ಒದಗಿಸಲಾಗಿದೆ. |
| ಇ) | ತಡೆಹಿಡಿದಿರುವ ಮನೆಗಳನ್ನು ಯಾವಾಗ ಪುನರ್ ನೀಡಲಾಗುವುದು; ಫಲಾನುಭವಿಗಳಿಗೆ ಹಣವನ್ನು ಯಾವಾಗ ನೀಡಲಾಗುವುದು; (ವಿವರ ನೀಡುವುದು) | ವಿವಿಧ ವಸತಿ ಯೋಜನೆಗಳಡಿ ರದ್ದಾದ ಮನೆಗಳನ್ನು ವಸತಿ ಯೋಜನೆಗಳ ಮಾರ್ಗಸೂಚಿಗಳ ಪ್ರಕಾರ ಮತ್ತೊಮ್ಮೆ ಹಂಚಿಕೆ ಮಾಡಲು ಅವಕಾಶವಿರುವುದಿಲ್ಲ. |
| ಈ) | ಮಂಜೂರು ಆಗಿ ಜಿ.ಪಿ.ಎಸ್. ಮಾಡಿದ್ದರು ಮನೆಗಳನ್ನು ತಡೆ ಹಿಡಿದಿರುವುದರಿಂದ ಫಲಾನುಭವಿಗಳಿಗೆ ಆಗಿರುವ ತೊಂದರೆಗಳು ಸರಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಬಿಡುಗಡೆಗೊಳಿಸಲು ಸರಕಾರ ಯಾವ ಕ್ರಮ ಕೈಗೊಂಡಿದೆ; (ಪೂರ್ಣ ವಿವರ ನೀಡುವುದು) | ಹೌದು.<br><br>ವಿವಿಧ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗಳ ನಿಗಮದ ಆನ್‌ಲೈನ್‌ನಲ್ಲಿ ಅಳವಡಿಸಿದ ಜಿ.ಪಿ.ಎಸ್. ಆಧಾರಿತ ಭೌತಿಕ ಪ್ರಗತಿಯನ್ನು ನಿಗಮದ ಆಡಿಟ್ ವಿಭಾಗದಲ್ಲಿ ಪರಿಶೀಲಿಸಿ, ನಿರ್ಮಿಸಿದ ಮನೆಯು ಅರ್ಹವಿದ್ದಲ್ಲಿ, ಗರಿಷ್ಠ 15 ದಿನಗಳ ಒಳಗೆ ಅನುದಾನವನ್ನು ನೇರವಾಗಿ ಫಲಾನುಭವಿಗಳ ಖಾತೆಗೆ ಬಿಡುಗಡೆ ಮಾಡುತ್ತಿದೆ. ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲು ಯಾವುದೇ ಬಾಕಿ ಇರುವುದಿಲ್ಲ. ಆದರೆ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಯನ್ನು ಪರಿಶೀಲಿಸುವಾಗ ಈ ಕೆಳಕಂಡ ಕಾರಣಗಳಿಂದ ಫಲಾನುಭವಿಗಳನ್ನು ಅನರ್ಹಗೊಳಿಸಿ ಅನುದಾನ ಬಿಡುಗಡೆ ಮಾಡಿರುವುದಿಲ್ಲ:<br><br>1. **ನಿಗದಿಪಡಿಸಿದ ಘಟಕವೆಚ್ಚ ಮೀರಿ ನಿರ್ಮಿಸಿದ ಮನೆ:**<br>ನಿಯಮಾನುಸಾರ ಸರ್ಕಾರವು ಪ್ರತಿ ಮನೆಗೆ ನೀಡುವ ಸಹಾಯಧನದ ಜೊತೆಗೆ ಫಲಾನುಭವಿಗಳ ಸ್ವಂತ ವಂತಿಕೆ ಹಣವನ್ನು ಉಪಯೋಗಿಸಿಕೊಂಡು ಗರಿಷ್ಠ 5 ಲಕ್ಷದವರೆಗೆ ಮನೆ ನಿರ್ಮಿಸಿಕೊಳ್ಳಲು ಅವಕಾಶ ನೀಡಿದೆ. ಆದರೆ ಕೆಲವು ಫಲಾನುಭವಿಗಳು ರೂ. 6.00 ರಿಂದ ರೂ.20.00 ಲಕ್ಷಕ್ಕೂ ಹೆಚ್ಚು ಅನುದಾನ |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| | | ವಿನಿಯೋಗಿಸಿ ಮನೆ ನಿರ್ಮಿಸುತ್ತಿರುವ ಕಾರಣ, ಅನರ್ಹರೆಂದು ಪರಿಗಣಿಸಿ ಅನುದಾನವನ್ನು ತಡೆಹಿಡಿಯಲಾಗಿದೆ.<br><br>2. **ಮನೆ ವಿಸ್ತರಣೆ :**<br>ವಾಸಕ್ಕೆ ಈಗ್ಗಾಗಲೇ ಸ್ವಂತ ಮನೆ ಹೊಂದಿರುವ ಫಲಾನುಭವಿಯು ತನ ಮನೆಯನ್ನು ವಿಸ್ತರಣೆ ಮಾಡಿಕೊಳ್ಳುತ್ತಿರುವ ಫಲಾನುಭವಿಗಳನ್ನು ಅನರ್ಹರೆಂದ ಪರಿಗಣಿಸಿ ಅನುದಾನವನ್ನು ತಡೆಹಿಡಿಯಲಾಗಿದೆ.<br><br>3. **ಹಳೇ ಮನೆ ಅಥವಾ ಹಂತವಾರು ಛಾಯಾಚಿತ್ರಗಳ ಅವಶ್ಯಕತೆ:**<br>ಸುಮಾರು ವರ್ಷದ ಹಿಂದೆ ನಿರ್ಮಿಸಿರುವ ಹಳೇ ಮನೆಗಳನ್ನು ಜಿಪಿಎಸ್ ಅಳವಡಿಸಿರುವ ಕಾರಣ ಮತ್ತು ಮನೆ ನಿರ್ಮಾಣಕ್ಕೆ ಸಂಬಂಧಪಟ್ಟಂತೆ 4 ಹಂತ ಜೆ.ಪಿ.ಎಸ್. ಛಾಯಾಚಿತ್ರಗಳನ್ನು ಅಳವಡಿಸದೆ, ಹಾಲಿ ಇರುವ ಮನೆಯನ್ನೇ ಜೆ.ಪಿ.ಎಸ್.ಗೆ ಅಳವಡಿಸಿರುವ ಕಾರಣ ಅಂತಹ ಫಲಾನುಭವಿಗಳನ್ನು ಅನರ್ಹರೆಂದು ಪರಿಗಣಿಸಿ ಅನುದಾನವನ್ನು ತಡೆಹಿಡಿಯಲಾಗಿದೆ.<br><br>4. **ವಸತಿಯೇತರ ಉದ್ದೇಶಕ್ಕಾಗಿ ನಿರ್ಮಿಸಿಕೊಂಡಿರುವುದು:**<br>ನಿರ್ಮಿಸುತ್ತಿರುವ ಮನೆಯನ್ನು ವಾಸೇತರ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿರುವುದಾಗಿ ಕಂಡು ಬಂದ ಫಲಾನುಭವಿಗಳು ಅನರ್ಹರೆಂದು ಪರಿಗಣಿಸಿ ಅನುದಾನವನ್ನು ತಡೆಹಿಡಿಯಲಾಗಿದೆ.<br><br>ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಹಂತದಲ್ಲಿ ಜೆ.ಪಿ.ಎಸ್. ಛಾಯಾಚಿತ್ರಗಳನ್ನು ಆಧರಿಸಿ ಅನರ್ಹರನ್ನು ಗುರುತಿಸಲಾಗಿದ್ದು, ಒಂದು ವೇಳೆ ವಾಸ್ತವಿಕವಾಗಿ ನಿರ್ಮಾಣಗೊಂಡಿರುವ ಮನೆಯು ಅರ್ಹವಿರುವುದು ಕಂಡುಬಂದಲ್ಲಿ, ಸ್ಥಳೀಯ ಸಂಸ್ಥೆ / ತಾಲ್ಲೂಕು ಮಟ್ಟದ ಅಧಿಕಾರಿಗಳ ದೃಢೀಕರಣದೊಂದಿಗೆ, ನಿಗದಿತ ನಮೂನೆಯಲ್ಲಿ ಪ್ರಸ್ತಾವನೆಯನ್ನು ಜಿಲ್ಲಾಡಳಿತವು ಆನ್‌ಲೈನ್ ಮೂಲಕ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸಿದಲ್ಲಿ, ಪರಿಶೀಲಿಸಿ, ಅರ್ಹರಿದ್ದಲ್ಲಿ ಅನುದಾನ ಬಿಡುಗಡೆಗೊಳಿಸಲು ಕ್ರಮ ವಹಿಸಲಾಗುತ್ತಿದೆ. |
| ಉ) | ಕಳೆದ ಮೂರು ವರ್ಷಗಳಿಂದ ಬಳ್ಳಾರಿ ಗ್ರಾಮಾಂತರ ವಿಧಾನಸಭಾ ಕ್ಷೇತ್ರಕ್ಕೆ ಮಂಜೂರಾಗಿರುವ ಮನೆಗಳು ಪ್ರಸ್ತುತ ಯಾವ ಯಾವ ಹಂತದಲ್ಲಿವೆ; ವಿಳಂಬವಾಗಲು ಕಾರಣಗಳೇನು? (ವರ್ಷವಾರು, ಯೋಜನೆವಾರು, ಫಲಾನುಭವಿಗಳ ವಿವರಗಳನ್ನು ನೀಡುವುದು) | ಕಳೆದ ಮೂರು ವರ್ಷಗಳಿಂದ ವಿವಿಧ ವಸತಿ ಯೋಜನೆಗಳಡಿ ಬಳ್ಳಾರಿ ಗ್ರಾಮಾಂತರ ವಿಧಾನಸಭಾ ಕ್ಷೇತ್ರಕ್ಕೆ ಮಂಜೂರು ಆಗಿರುವ 9115 ಮನೆಗಳಲ್ಲಿ 386 ಮನೆಗಳು ತಳಪಾಯ 498 ಗೋಡೆ 510 ಛಾವಣಿ ಹಂತದಲ್ಲಿ 1006 ಮನೆಗಳು ಇನ್ನು ಪ್ರಾರಂಭವಾಗಬೇಕಿರುತ್ತವೆ.<br><br>ವಿವಿಧ ವಸತಿ ಯೋಜನೆಗಳಡಿಯಲ್ಲಿ ಫಲಾನುಭವಿಗಳು ತಮ್ಮ ಮನೆಗಳನ್ನು ತಾವೇ ನಿರ್ಮಿಸಿಕೊಳ್ಳಬೇಕಿರುತ್ತದೆ. ಕೆಲವು ಫಲಾನುಭವಿಗಳಿಗೆ ಸಾಕಷ್ಟು ಕಾಲಾವಕಾಶ ನೀಡಿದರೂ ಹಾಗೂ ಸ್ಥಳೀಯ ಅಧಿಕಾರಿಗಳು ಪೂರ್ಣ ಸಹಕಾರ ಹಾಗೂ ಪ್ರೋತ್ಸಾಹ ನೀಡಿದರೂ ಸಹ ತಮ್ಮ ವೈಯಕ್ತಿಕ ಕಾರಣಗಳಿಂದ ಮನೆಗಳನ್ನು ನಿಗದಿತ ಸಮಯದಲ್ಲಿ ನಿರ್ಮಿಸಿಕೊಳ್ಳಲು ಆಸಕ್ತಿ ತೋರುತ್ತಿಲ್ಲ. ಆದಕಾರಣ ಮಂಜೂರಾದ ಮನೆಗಳನ್ನು ನಿಗದಿತ ಸಮಯದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗುತ್ತಿಲ್ಲ. ಆದರೂ ಸಹ ಅಂತಹ ಫಲಾನುಭವಿಗಳ ಮನವೊಲಿಸಿ ಮನೆಗಳನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುತ್ತಿದೆ.<br><br>ಆದಾಗ್ಯೂ ಸಹ ಮನೆ ನಿರ್ಮಾಣದಲ್ಲಿ ಫಲಾನುಭವಿಗೆ ಇರುವ ವೈಯುಕ್ತಿಕ ಸಮಸ್ಯೆಗಳು, ಮಳೆಗಾಲ, ಆರ್ಥಿಕ ಸಮಸ್ಯೆಗಳು, ಬಡತನ ಮುಂತಾದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಫಲಾನುಭವಿಗೆ ತಿಳುವಳಿಕೆ ಪತ್ರಗಳನ್ನು ಜಾರಿ ಮಾಡುವ ಮೂಲಕ ಅವರ ಮನವೊಲಿಸಿ ಮನೆ ನಿರ್ಮಾಣಕ್ಕೆ ಒತ್ತು ನೀಡಲಾಗಿದೆ ಹಾಗೂ ಅನೇಕ ವಿಡಿಯೋ ಕಾನ್ಫರೆನ್ಸ್ ಮತ್ತು ಪ್ರಗತಿ ಪರಿಶೀಲನಾ ಸಭೆಗಳಲ್ಲಿ ಪ್ರಾರಂಭವಾಗದ ಮನೆಗಳನ್ನು ಕೂಡಲೇ ಪ್ರಾರಂಭಿಸಲು ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಲು ತಿಳಿಸಲಾಗಿದೆ.<br><br>ವರ್ಷವಾರು, ಯೋಜನೆವಾರು, ಫಲಾನುಭವಿಗಳ ವಿವರವನ್ನು **ಅನುಬಂಧ-3** ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: ವಇ 173 ಹೆಚ್‌ಎಎಂ 2018

(ಯು.ಟಿ.ಅಬ್ದುಲ್ ಖಾದರ್)
ವಸತಿ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ - 496
ಉತ್ತರಿಸಬೇಕಾದ ದಿನಾಂಕ - 11.07.2018
ಸದಸ್ಯರ ಹೆಸರು - ಶ್ರೀ ಬಿ.ನಾಗೇಂದ್ರ(ಬಳ್ಳಾರಿ)

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ವಸತಿ ಇಲಾಖೆಯ ವಿವಿಧ ಯೋಜನೆಗಳ ಅಡಿಯಲ್ಲಿ ಮಂಜೂರು ಮಾಡಿರುವ ಮನೆಗಳು ಎಷ್ಟು? (ಜಿಲ್ಲಾವಾರು, ಯೋಜನೆವಾರು, ವರ್ಷವಾರು ವಿವರ ನೀಡುವುದು) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ವಸತಿ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಒಟ್ಟು 1735221 ಮನೆಗಳನ್ನು ಮಂಜೂರು ಮಾಡಲಾಗಿರುತ್ತದೆ.<br><br>ಜಿಲ್ಲಾವಾರು, ಯೋಜನೆವಾರು, ವರ್ಷವಾರು ವಿವರ **ಅನುಬಂಧ-1** ರಲ್ಲಿ ಒದಗಿಲಾಗಿದೆ. |
| ಆ) | ಕಳೆದ ಮೂರು ವರ್ಷಗಳಿಂದ ವಿವಿಧ ವಸತಿ ಯೋಜನೆಯ ಅಡಿಯಲ್ಲಿ ಮಂಜೂರಾದ ಮನೆಗಳನ್ನು ಬ್ಲಾಕ್ ಲೀಸ್ಟ್‌ಗೆ ಸೇರಿಸಲಾಗಿದೆಯೇ? ತಡೆಹಿಡಿಯಲು ಕಾರಣಗಳೇನು; (ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳ ವಿವರ ನೀಡುವುದು) | ಹೌದು.<br><br>ವಸತಿ ಯೋಜನೆಯ ಮಾರ್ಗಸೂಚಿಗಳ ಪ್ರಕಾರ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗಳು ನಿಗಮದ ಅನುಮೋದನೆ ಪಡೆದ ದಿನಾಂಕದ ನಂತರ 90 ದಿನಗಳೊಳಗೆ ತನ್ನ ಮನೆಯ ಕಾಮಗಾರಿಯನ್ನು ಪ್ರಾರಂಭಿಸಿಕೊಳ್ಳಬೇಕಿರುತ್ತದೆ. ಒಂದು ವೇಳೆ ಈ ಅವಧಿಯೊಳಗೆ ಫಲಾನುಭವಿಯು ಮನೆಯನ್ನು ಪ್ರಾರಂಭ ಮಾಡಿಕೊಳ್ಳದಿದ್ದಲ್ಲಿ ಮನೆಯನ್ನು ರದ್ದುಪಡಿಸಲು ಅವಕಾಶ ಕಲ್ಪಿಸಲಾಗಿದೆ.<br><br>ಆದಾಗ್ಯೂ ಸಹ ಮನೆ ನಿರ್ಮಾಣದಲ್ಲಿ ಫಲಾನುಭವಿಗೆ ಇರುವ ವೈಯುಕ್ತಿಕ ಸಮಸ್ಯೆಗಳು, ಮಳೆಗಾಲ, ಆರ್ಥಿಕ ಸಮಸ್ಯೆಗಳು, ಬಡತನ ಮುಂತಾದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಫಲಾನುಭವಿಗೆ ತಿಳುವಳಿಕೆ ಪತ್ರಗಳನ್ನು ಜಾರಿ ಮಾಡುವ ಮೂಲಕ ಅವರ ಮನವೊಲಿಸಿ ಮನೆ ನಿರ್ಮಾಣಕ್ಕೆ ಒತ್ತು ನೀಡಲಾಗಿದೆ ಹಾಗೂ ಅನೇಕ ವಿಡಿಯೋ ಕಾನ್ಫರೆನ್ಸ್ ಮತ್ತು ಪ್ರಗತಿ ಪರಿಶೀಲನಾ ಸಭೆಗಳಲ್ಲಿ ಪ್ರಾರಂಭವಾಗದ ಮನೆಗಳನ್ನು ಕೂಡಲೇ ಪ್ರಾರಂಭಿಸಲು ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಲು ತಿಳಿಸಲಾಗಿದೆ.<br><br>ಅಲ್ಲದೇ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಮೂಲಕ ಸಾಕಷ್ಟು ತಿಳುವಳಿಕೆ ಪತ್ರಗಳನ್ನು ನೀಡಿದ್ದಾಗ್ಯೂ ಸುಮಾರು ಮನೆಗಳು ಪ್ರಾರಂಭವಾಗಿರುವುದಿಲ್ಲ. ಅಂತಹ ಆಯ್ಕೆಗಳನ್ನು ರದ್ದುಪಡಿಸಲಾಗಿದೆ.<br><br>ತಾಲ್ಲೂಕುಗಳ ವಿವರವನ್ನು **ಅನುಬಂಧ-2**ರಲ್ಲಿ ಒದಗಿಸಲಾಗಿದೆ. |
| ಇ) | ತಡೆಹಿಡಿದಿರುವ ಮನೆಗಳನ್ನು ಯಾವಾಗ ಪುನರ್ ನೀಡಲಾಗುವುದು; ಫಲಾನುಭವಿಗಳಿಗೆ ಹಣವನ್ನು ಯಾವಾಗ ನೀಡಲಾಗುವುದು; (ವಿವರ ನೀಡುವುದು) | ವಿವಿಧ ವಸತಿ ಯೋಜನೆಗಳಡಿ ರದ್ದಾದ ಮನೆಗಳನ್ನು ವಸತಿ ಯೋಜನೆಗಳ ಮಾರ್ಗಸೂಚಿಗಳ ಪ್ರಕಾರ ಮತ್ತೊಮ್ಮೆ ಹಂಚಿಕೆ ಮಾಡಲು ಅವಕಾಶವಿರುವುದಿಲ್ಲ. |
| ಈ) | ಮಂಜೂರು ಆಗಿ ಜಿ.ಪಿ.ಎಸ್. ಮಾಡಿದ್ದರು ಮನೆಗಳನ್ನು ತಡೆ ಹಿಡಿದಿರುವುದರಿಂದ ಫಲಾನುಭವಿಗಳಿಗೆ ಆಗಿರುವ ತೊಂದರೆಗಳು ಸರಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಬಿಡುಗಡೆಗೊಳಿಸಲು ಸರಕಾರ ಯಾವ ಕ್ರಮ ಕೈಗೊಂಡಿದೆ; (ಪೂರ್ಣ ವಿವರ ನೀಡುವುದು) | ಹೌದು.<br><br>ವಿವಿಧ ವಸತಿ ಯೋಜನೆಗಳಡಿ ಆಯ್ಕೆಯಾದ ಫಲಾನುಭವಿಗಳ ನಿಗಮದ ಆನ್‌ಲೈನ್‌ನಲ್ಲಿ ಅಳವಡಿಸಿದ ಜಿ.ಪಿ.ಎಸ್. ಆಧಾರಿತ ಭೌತಿಕ ಪ್ರಗತಿಯನ್ನು ನಿಗಮದ ಆಡಿಟ್ ವಿಭಾಗದಲ್ಲಿ ಪರಿಶೀಲಿಸಿ, ನಿರ್ಮಿಸಿದ ಮನೆಯು ಅರ್ಹವಿದ್ದಲ್ಲಿ, ಗರಿಷ್ಠ 15 ದಿನಗಳ ಒಳಗೆ ಅನುದಾನವನ್ನು ನೇರವಾಗಿ ಫಲಾನುಭವಿಗಳ ಖಾತೆಗೆ ಬಿಡುಗಡೆ ಮಾಡುತ್ತಿದೆ. ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲು ಯಾವುದೇ ಬಾಕಿ ಇರುವುದಿಲ್ಲ. ಆದರೆ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಯನ್ನು ಪರಿಶೀಲಿಸುವಾಗ ಈ ಕೆಳಕಂಡ ಕಾರಣಗಳಿಂದ ಫಲಾನುಭವಿಗಳನ್ನು ಅನರ್ಹಗೊಳಿಸಿ ಅನುದಾನ ಬಿಡುಗಡೆ ಮಾಡಿರುವುದಿಲ್ಲ:<br><br>1. **ನಿಗದಿಪಡಿಸಿದ ಘಟಕವೆಚ್ಚ ಮೀರಿ ನಿರ್ಮಿಸಿದ ಮನೆ:**<br>ನಿಯಮಾನುಸಾರ ಸರ್ಕಾರವು ಪ್ರತಿ ಮನೆಗೆ ನೀಡುವ ಸಹಾಯಧನದ ಜೊತೆಗೆ ಫಲಾನುಭವಿಗಳ ಸ್ವಂತ ವಂತಿಕೆ ಹಣವನ್ನು ಉಪಯೋಗಿಸಿಕೊಂಡು ಗರಿಷ್ಠ 5 ಲಕ್ಷದವರೆಗೆ ಮನೆ ನಿರ್ಮಿಸಿಕೊಳ್ಳಲು ಅವಕಾಶ ನೀಡಿದೆ. ಆದರೆ ಕೆಲವು ಫಲಾನುಭವಿಗಳು ರೂ. 6.00 ರಿಂದ ರೂ.20.00 ಲಕ್ಷಕ್ಕೂ ಹೆಚ್ಚು ಅನುದಾನ |

